



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 44

| ಸಂಪುಟ: ೦೫ ಸಂಚಿಕೆ: ೬ | ಸೆಪ್ಟೆಂಬರ್ ೨೦೧೮ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 05 Issue 6 | September 2018 | Pages - 8 | A. Sub. - Rs. 20/- | Editor : Sri. B.R. Ravindranath |




**ಚಂದಾ ವಿವರಗಳು**

**ವಾರ್ಷಿಕ ಚಂದಾ**
**ರೂ. ೨೦/–**
**ಐದು ವರ್ಷಗಳ ಚಂದಾ**
**ರೂ. ೧೦೦/–**


ವಿಳಾಸ

**ಬಿ.ಎಂ.ಶ್ರೀ. ಪ್ರತಿಷ್ಠಾನ**
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
**web: www.bmshri.org**
ಕಛೇರಿ ಸಮಯ:
ಮಧ್ಯಾಹ್ನ 12–30ರಿಂದ ಸಂಜೆ 7–30ಗಂಟೆ.
ವಾರದ ರಜೆ: ಮಂಗಳವಾರ




ರಾಷ್ಟ್ರ ರಾಜಕಾರಣದ ಅಜಾತ ಶತ್ರು,
ದೇಶ ಕಂಡ ಧೀಮಂತ ನಾಯಕ, ಮಾಜಿ ಪ್ರಧಾನಿ
ಬಿಜೆಪಿ ಸಂಸ್ಥಾಪಕ ಅಧ್ಯಕ್ಷರಾದ, ಭಾರತ ರತ್ನ
**ಸನ್ಮಾನ್ಯ ಶ್ರೀ ಅಟಲ್ ಬಿಹಾರಿ ವಾಜಪೇಯಿ** ಅವರಿಗೆ
**ಭಾವಪೂರ್ಣ ಶ್ರದ್ಧಾಂಜಲಿ**

## ದಿನಾಂಕ ೧೨ನೇ ಆಗಸ್ಟ್ ೨೦೧೮ ರಂದು ನಡೆದ ಬಿಎಂಶ್ರೀ ಪ್ರತಿಷ್ಠಾನದ ಸರ್ವ ಸದಸ್ಯರ ಸಭೆಯ ಕೆಲವು ಭಾವಚಿತ್ರಗಳು










## ಸಂಪಾದಕೀಯ

ಕನ್ನಡ ಭಾಷೆಯಲ್ಲಿ ಪ್ರತಿ ವರ್ಷ ಸುಮಾರು ಏಳು ಸಾವಿರ ಪುಸ್ತಕಗಳನ್ನು ಪ್ರಕಟಿಸಲಾಗುತ್ತಿದೆ ಎಂದು ಅಂದಾಜಿಸಲಾಗಿದೆ. ಹೀಗೆ ಪ್ರಕಟಗೊಂಡ ಪುಸ್ತಕಗಳು ಓದುಗರಿಗೆ ಎಷ್ಟರ ಮಟ್ಟಿಗೆ ತಲುಪುತ್ತಿವೆ ಎಂಬುದರ ಬಗ್ಗೆ ಮಾಹಿತಿ ಇಲ್ಲ. ಆದರೆ ಈ ಪ್ರಮಾಣದಲ್ಲಿ ಪುಸ್ತಕಗಳು ಪ್ರಕಟಗೊಳ್ಳುತ್ತಿರುವುದೇ ಅವುಗಳು ಓದುಗರನ್ನು ತಲುಪುತ್ತಿರುವುದಕ್ಕೆ ಸಾಕ್ಷಿ ಎಂಬ ವಾದವಿದೆ. ಈ ವಾದಕ್ಕೆ ಪೂರಕವಾಗಿ ಆಲೋಚಿಸಿದಾಗ - ಒಂದೇ ಒಂದು ಬಾರಿಯ ಉಪಾಹಾರದ ವೆಚ್ಚದಲ್ಲಿ ಎಷ್ಟೋ ಪುಸ್ತಕಗಳನ್ನು ಖರೀದಿಸುವ ಅವಕಾಶಗಳಿರುವಾಗ ಪುಸ್ತಕಗಳನ್ನು ಮಾರಾಟ

ಮಾಡುವುದು ಕಷ್ಟಕರವಲ್ಲ ಎಂದು ತೋರುತ್ತದೆ.

ಇಂಗ್ಲೆಂಡ್ ನಲ್ಲಿ ಗ್ರಂಥಾಲಯಗಳಲ್ಲಿನ ಪುಸ್ತಕಗಳನ್ನು ವರ್ಷದಲ್ಲಿ ಎಷ್ಟು ಬಾರಿ ಎರವಲು ಪಡೆಯಲಾಗಿದೆ ಎಂಬುದರ ಆಧಾರದ ಮೇಲೆ ಆಯಾ ಲೇಖಕರಿಗೆ ರಾಯಧನ ಲಭ್ಯವಾಗುತ್ತದೆ ಎಂದು ವರದಿಗಳಿವೆ. ನಮ್ಮ ರಾಜ್ಯದಲ್ಲಿ ಸರಕಾರಿ ಗ್ರಂಥಾಲಯಗಳು ಹೆಚ್ಚಿನ ಸಂಖ್ಯೆಯಲ್ಲಿದ್ದರೂ ಈ ಗ್ರಂಥಾಲಯಗಳಿಂದ ಪುಸ್ತಕಗಳನ್ನು ಎರವಲು ಪಡೆದ ಅಂಕಿ ಅಂಶಗಳನ್ನು ಕ್ರೋಢೀಕರಿಸಿ ದಾಖಲಿಸುವ ಪರಿಕಲ್ಪನೆ ಸಹ ಇರುವುದಿಲ್ಲ. ಅಂತಹ ಮಾಹಿತಿಗಳು ಲಭ್ಯವಿದ್ದಲ್ಲಿ ಪುಸ್ತಕಗಳು ಎಷ್ಟರ ಮಟ್ಟಿಗೆ ಓದುಗರನ್ನು ತಲುಪುತ್ತಿವೆ ಎಂದು ಅಂದಾಜಿಸಬಹುದು.

ಮಾನವರು ವಿಶ್ವದ ಮಟ್ಟದಲ್ಲಿ ಇಡೀ ೨೦೧೮ನೇ ಇಸವಿಯಲ್ಲಿ ಬಳಸಬೇಕಾದ ಸಂಪನ್ಮೂಲಗಳನ್ನು ಜುಲೈ ೨೦೧೮ ರ ಒಳಗೆ ಬಳಸಿಬಿಟ್ಟಿರುತ್ತಾರೆ ಎಂಬ ಆತಂಕಕಾರಿ ಸುದ್ದಿಯನ್ನು ಇತ್ತೀಚೆಗೆ ಪ್ರಕಟಿಸಲಾಗಿದೆ.ಒಂದು ಟನ್ ಕಾಗದದ ಉತ್ಪಾದನೆಗೆ ೧೭ ಮರಗಳನ್ನು ಕಡಿಯಬೇಕಾಗುತ್ತದೆ ಹಾಗೂ ಒಂದು ಮರದಿಂದ ೧೬.೬೭ ರೀಮುಗಳಷ್ಟು ಅಂದರೆ ೮೬೩೩ ಹಾಳೆಗಳನ್ನು ಉತ್ಪಾದಿಸಲಾಗುತ್ತದೆಯಂತೆ.ಹಾಗೆಯೇ ಒಂದು ಕೆಜಿ ತೂಕದ ಕಾಗದವನ್ನು ಉತ್ಪಾದಿಸಲು ೩೦೦–೪೦೦ ಲೀಟರ್ ಗಳಷ್ಟು ನೀರು ಬೇಕಾಗುತ್ತದೆಯಂತೆ.

ಪರಿಸರ ನಾಶದ ಕಾರಣದಿಂದ ಕೇರಳ ಹಾಗೂ ಕೊಡಗು ಪ್ರದೇಶಗಳಲ್ಲಿ ಮಳೆ ಹಾಗೂ ಪ್ರವಾಹಗಳ ವಿಕೋಪ ಉಂಟಾಗಿವೆ ಎಂದು ವಿಜ್ಞಾನಿಗಳು ಪತ್ತೆಹಚ್ಚಿದ್ದಾರೆ.ಈ ರೀತಿಯಲ್ಲಿ ಪರಿಸರ ನಾಶಗೊಂಡು ಲಕ್ಷಾಂತರ ಜನಗಳು ಅಪಾರ ಮಟ್ಟದ ಕಷ್ಟ ನಷ್ಟಗಳನ್ನು ಅನುಭವಿಸುತ್ತಿರುವಾಗ ಕಾಗದಕ್ಕೆ ಇರುವ ಬೇಡಿಕೆಗಳನ್ನು ಕಡಿತಗೊಳಿಸುವುದು ಅಪೇಕ್ಷಣೀಯವಲ್ಲವೇ ಎಂಬ ಪ್ರಶ್ನೆ ಎದುರಾಗುತ್ತಿದೆ.

ಈ ಪರಿಸ್ಥಿತಿಯಲ್ಲಿ ಈ ಲೇಖಕನಿಗೆ ಎದುರಾಗಿರುವ ಸೈದ್ಧಾಂತಿಕ ಗೊಂದಲಗಳೆಂದರೆ ಕಾಗದಕ್ಕೆ ಹೆಚ್ಚು ಬೇಡಿಕೆ ಉಂಟು ಮಾಡುವ ಪುಸ್ತಕಗಳನ್ನು ನಾನುಏಕೆ ಬರೆಯಬೇಕು?ಬರೆದರೂ ಏಕೆ ಪ್ರಕಟಿಸಬೇಕು?ನಾನು ನನಗಾಗಿ ಬರೆಯುವುದಾದರೆ ಏಕೆ ಪ್ರಕಟಿಸಬೇಕು?ನಾನು ಓದುಗರಿಗಾಗಿ ಬರೆಯುವ ಹಾಗಿದ್ದರೆ ಓದುಗರಿಗೆ ನಾನು ಬರೆದದ್ದು ಉಪಯುಕ್ತವಾಗುತ್ತದೆ ಎಂಬುದನ್ನು ಖಚಿತಪಡಿಸಿಕೊಳ್ಳುವುದು ಹೇಗೆ?ನಾನು ಬರೆದದ್ದು ಓದುಗರಿಗೆ ತಲುಪದಿದ್ದರೆ ನನಗಾಗಲೀ ಅವರಿಗಾಗಲೀ ಆಗುವ ನಷ್ಟವಾದರೂ ಏನು?ನಾನು ಬರೆದಿದ್ದನ್ನು ಬೇರೆ ಲೇಖಕರೂ ಬರೆದಿರಬಹುದಲ್ಲವೇ?ಓದುಗರಿಗೆ ಪುಸ್ತಕ ರೂಪದಲ್ಲಿಯೇ ನಮ್ಮ ಬರವಣಿಗೆಗಳನ್ನು ತಲುಪಿಸಬೇಕೆ?

ಈ ಪ್ರಶ್ನೆಗಳಿಗೆ ಇನ್ನೂ ಉತ್ತರಗಳು ದೊರೆತಿಲ್ಲ. ಪರಿಣಾಮ– ಬರೆದಿರುವ ಪುಸ್ತಕಗಳು ಪ್ರಕಟಗೊಂಡಿಲ್ಲ. ಬರೆಯಬೇಕು ಎಂದು ಆಲೋಚಿಸಿರುವ ವಿಷಯಗಳು ಬರಹ ರೂಪಕ್ಕೆ ಬಂದಿಲ್ಲ.

**ಬಿ.ಆರ್ ರವೀಂದ್ರನಾಥ್**
**ಸಂಪಾದಕರು**

### ಪ್ರಕಟಣೆ

## ಶ್ರೀಮತಿ ಸಾವಿತ್ರಮ್ಮ–ಪ್ರೊ॥ ಎಂ.ವಿ.ಸೀ. ಸಾಹಿತ್ಯ ಪುರಸ್ಕಾರ–೨೦೧೮

ಬಿ.ಎಂ.ಶ್ರೀ.ಪ್ರತಿಷ್ಠಾನವು ನೀಡುತ್ತಿರುವ ಶ್ರೀಮತಿ ಸಾವಿತ್ರಮ್ಮ–ಪ್ರೊ. ಎಂ.ವಿ.ಸೀತಾರಾಮಯ್ಯ ಸಾಹಿತ್ಯ ಪುರಸ್ಕಾರಕ್ಕೆ ಹಳಗನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಗಣನೀಯ ಕೃಷಿ ಮಾಡಿರುವ ಡಾ. ಸೀತಾರಾಮ್ ಜಾಗೀರ್ ದಾರ್ ಅವರನ್ನು ೨೦೧೮ನೇ ವರ್ಷಕ್ಕೆ ಆಯ್ಕೆ ಸಮಿತಿಯು ಸರ್ವಾನುಮತದಿಂದ ಆಯ್ಕೆ ಮಾಡಿದೆ. ಪುರಸ್ಕಾರವು ನಗದು ರೂ.೩೦,೦೦೦/–(ಮೂವತ್ತು ಸಾವಿರ ರೂಪಾಯಿಗಳು) ಮತ್ತು ಫಲಕವನ್ನು ಒಳಗೊಂಡಿರುತ್ತದೆ.

ಪುರಸ್ಕಾರ ಪ್ರದಾನ ಸಮಾರಂಭವು ದಿನಾಂಕ : ೦೯–೦೯–೨೦೧೮ ರಂದು ಭಾನುವಾರ ಬೆಳಿಗ್ಗೆ ೧೧–೦೦ ಗಂಟೆಗೆ ಬಿ.ಎಂ.ಶ್ರೀ. ಪ್ರತಿಷ್ಠಾನದ ಎಂ.ವಿ.ಸೀ. ಸಭಾಂಗಣದಲ್ಲಿ ನಡೆಯಲಿದೆ.ಡಾ. ಟಿ.ವಿ.ವೆಂಕಟಾಚಲ ಶಾಸ್ತ್ರೀ ಅವರು ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿ ಪ್ರಶಸ್ತಿ ಪ್ರದಾನವನ್ನು ಮಾಡಲಿದ್ದಾರೆ.

### ಪ್ರಕಟಣೆ

## ಶಾ. ಬಾಲೂರಾವ್ ಯುವಬರಹಗಾರ ಪ್ರಶಸ್ತಿಗಾಗಿ ಕೃತಿಗಳ ಆಹ್ವಾನ

ಬಿ.ಎಂ.ಶ್ರೀ. ಪ್ರತಿಷ್ಠಾನವು ಪ್ರತಿ ವರ್ಷ ನೀಡುವ ಇಪ್ಪತ್ತೈದು ಸಾವಿರ ರೂಪಾಯಿಗಳ ನಗದು ಹಾಗೂ ಸ್ಮರಣಿಕೆಯನ್ನು ಒಳಗೊಂಡಿರುವ ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿಗಾಗಿ ೩೫ ವರ್ಷ ವಯಸ್ಸು ಮೀರದ ಯುವ ಬರಹಗಾರರು ರಚಿಸಿದ ೨೦೧೭ರಲ್ಲಿ ಮೊದಲ ಮುದ್ರಣವಾಗಿ ಪ್ರಕಟವಾಗಿರುವ ಸಾಹಿತ್ಯದ ಯಾವುದೇ ಪ್ರಕಾರದ ಕೃತಿಗಳನ್ನು ಆಹ್ವಾನಿಸುತ್ತಿದೆ.

ಆಸಕ್ತ ಲೇಖಕರು ಪ್ರಕಟಗೊಂಡ ಕೃತಿಯ ಎರಡು ಪ್ರತಿಗಳನ್ನು ತಮ್ಮ ವಿವರಗಳ ಜೊತೆ ಗೌರವ ಕಾರ್ಯದರ್ಶಿ, ಬಿ.ಎಂ.ಶ್ರೀ.ಪ್ರತಿಷ್ಠಾನ, ೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು–೫೬೦೦೧೯, ಇವರಿಗೆ ಕಳುಹಿಸಬಹುದು.ಕೊನೆಯ ದಿನಾಂಕ : ೧೦ನೇ ಸೆಪ್ಟಂಬರ್ ೨೦೧೮ ಸಂಪರ್ಕಿಸಿ : ೦೮೦–೨೬೬೧೫೮೭೭

### ಸೆಪ್ಟೆಂಬರ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಕೆ.ಪಿ. ಪೂರ್ಣಚಂದ್ರ ತೇಜಸ್ವಿ | ೮–೯–೧೯೩೮ |
| ದಿನಕರ ದೇಸಾಯಿ | ೧೦–೯–೧೯೦೯ |
| ಶ್ರೀರಂಗ | ೨೬–೯–೧೯೦೪ |
| ನಿರುಪಮಾ | ೩೦–೯–೧೯೩೧ |

### ಸೆಪ್ಟೆಂಬರ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಸಿದ್ಧಯ್ಯ ಪುರಾಣಿಕ | ೫–೯–೧೯೯೩ |
| ಎಂ. ಗೋವಿಂದ ಪೈ | ೧೦–೯–೧೯೬೩ |
| ತೀ.ನಂ.ಶ್ರೀಕಂಠಯ್ಯ | ೭–೯–೧೯೬೬ |
| ಎಂ.ಆರ್. ಶ್ರೀನಿವಾಸ ಮೂರ್ತಿ | ೧೬–೯–೧೯೫೩ |
| ತಿರುಮಲೆ ರಾಜಮ್ಮ | ೨೪–೯–೧೯೮೪ |
| ಶಂಬಾಜೋಶಿ | ೧೮–೯–೧೯೯೧ |
| ಗೊರೂರು ರಾಮಸ್ವಾಮಿ ಅಯ್ಯಂಗಾರ್ | ೨೮–೯–೧೯೯೧ |

# ಬಿ.ಎಂ.ಶ್ರೀ ಪ್ರತಿಷ್ಠಾನದ ೩೮ನೇ ಸರ್ವ ಸದಸ್ಯರ ಸಭೆ ವರದಿ

ದಿನಾಂಕ : ೧೨-೦೮-೨೦೧೮ರಂದು ಎಂವಿಸೀ ಸಭಾಂಗಣದಲ್ಲಿ ಬಿ.ಎಂ.ಶ್ರೀ ಪ್ರತಿಷ್ಠಾನದ ೩೮ನೇ ಸರ್ವ ಸದಸ್ಯರ ಸಭೆಯನ್ನು ನಡೆಸಲಾಯಿತು. ಈ ಸಭೆಯಲ್ಲಿ ವಾಡಿಕೆಯ ಕಾರ್ಯಕಲಾಪಗಳನ್ನು ಯಶಸ್ವಿಯಾಗಿ ನಡೆಸಲಾಯಿತು. ಪ್ರತಿಷ್ಠಾನದ ಸದಸ್ಯರು ಸರ್ವಸದಸ್ಯರ ಸಭೆಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಪ್ರತಿಷ್ಠಾನದ ಏಳಿಗೆಗಾಗಿ ಹಲವು ಉಪಯುಕ್ತ ಸಲಹೆಗಳನ್ನು ನೀಡಿ ಪದಾಧಿಕಾರಿಗಳಿಗೆ ಹಾಗೂ ಕಾರ್ಯಕಾರಿ ಸಮಿತಿ ಸದಸ್ಯರಿಗೆ ಪ್ರೋತ್ಸಾಹ ನೀಡಿರುತ್ತಾರೆ.

**ಡಾ. ಪಿ.ವಿ.ನಾರಾಯಣ ಅವರು ತಮ್ಮ ನಿವೃತ್ತಿಯನ್ನು ಪ್ರಕಟಿಸಿದರು.**

ಡಾ. ಪಿ.ವಿ.ನಾರಾಯಣ ಅವರ ಮಾತುಗಳು:

ನಾನು ಐದೂವರೆ ವರ್ಷಗಳ ಕಾಲ ಅಧ್ಯಕ್ಷರಾಗಿ ಪ್ರಾಮಾಣಿಕವಾಗಿ ಕಾರ್ಯ ನಿರ್ವಹಿಸುತ್ತಿದ್ದೇನೆ. ನಾಲ್ಕು - ಐದು ತಿಂಗಳ ಮುಂಚೆಯೇ ನನ್ನ ಸ್ಥಾನವನ್ನು ಬಿಟ್ಟುಕೊಡುತ್ತಿದ್ದೇನೆ. ಹಾಗಾಗಿ ಇದು ನನ್ನ ಕೊನೆಯ ಅಧ್ಯಕ್ಷೀಯ ಭಾಷಣ. ಸಂಸ್ಥೆಗೆ ಅಪಾರ ಹಣದ ಮೂಲಗಳು ಹರಿದು ಬಂದಿದೆ. ಸಂಸ್ಥೆಯ ಮೂಲ ಸೌಕರ್ಯಗಳು ಚೆನ್ನಾಗಿದೆ. ಹಳಗನ್ನಡ ತರಗತಿಗಳನ್ನು ಬಹಳ ಯಶಸ್ವಿಯಾಗಿ ನಡೆಸಿದ್ದೇವೆ. ಹಸ್ತಪ್ರತಿ ಹಾಗೂ ವಿವಿಧ ಕಾರ್ಯಕ್ರಮಗಳ ಸಂಯೋಜನೆ ಬಹಳ ಸಮಂಜಸವಾಗಿದೆ. ತೃಪ್ತಿಕರವಾಗಿದೆ. ಗ್ರಂಥಾಲಯ ನವೀಕರಣ ಸಂದರ್ಭದಲ್ಲಿ ಹೆಚ್ಚುವರಿ ಪುಸ್ತಕಗಳನ್ನು ಸಂಘ-ಸಂಸ್ಥೆಗಳಿಗೆ ವಿಶ್ವವಿದ್ಯಾಲಯಗಳಿಗೆ ಕೊಡುಗೆ-ಯಾಗಿ ನೀಡಿದ್ದೇವೆ. ಇದಕ್ಕಾಗಿ ಸಹಕರಿಸಿದ ಶ್ರೀ ಗುರುಪ್ರಸಾದ್ ಮತ್ತು ಶ್ರೀಮತಿ ವೀಣಾ ಅವರು ಸಹಕರಿಸಿದ್ದಾರೆ. ನನ್ನ ಅಧಿಕಾರದ ಅವಧಿಯಲ್ಲಿ ಕಾರ್ಯದರ್ಶಿಗಳು, ಖಂಜಾಚಿ, ಆಂತರಿಕ ಲೆಕ್ಕ ಪರಿಶೋಧಕರು, ಕಛೇರಿ ಸಿಬ್ಬಂದಿಗಳಾದ ಶ್ರೀಮತಿ ಪದ್ಮಾವತಿಬಾಯಿ, ಶ್ರೀಮತಿ ಲಕ್ಷ್ಮೀ ಮತ್ತು ಶ್ರೀಮತಿ ಗಾಯಿತ್ರಿ ಅವರು ಅತ್ಯುತ್ತಮವಾಗಿ ಸಹಕರಿಸಿದ್ದಾರೆ. ಎಂ.ವೀ.ಸೀ ಬೆಳೆಸಿದ ರೀತಿ ಹಾಗೂ ಸಂಸ್ಥೆಯ ಬಗ್ಗೆ ನನಗೆ ಅಪಾರ ಗೌರವವಿದೆ"

ಡಾ. ಎಂ.ಎಚ್. ಕೃಷ್ಣಯ್ಯನವರು ಡಾ.ಪಿ.ವಿ.ನಾರಾಯಣ ಅವರ ಕಾರ್ಯ ವೈಖರಿಯನ್ನು ಹೊಗಳಿದರು ಹಾಗೂ ಅವರಿಗೆ ಶುಭ ಹಾರೈಸಿದರು.

ಈ ವರ್ಷದ ಸರ್ವ ಸದಸ್ಯರ ಸಭೆಯಲ್ಲಿ ನಿಯಮಾನುಸಾರವಾಗಿ ನಿವೃತ್ತರಾದ ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿ ಸದಸ್ಯರಾದ ಡಾ. ಬಿ. ನಂಜುಂಡಸ್ವಾಮಿ, ಶ್ರೀವೈ.ಎನ್. ಶರ್ಮಾ, ಶ್ರೀ ಎಸ್.ವಿ. ಶ್ರೀನಿವಾಸ ಮೂರ್ತಿ, ಶ್ರೀಮತಿ ಎಂ.ಕೆ.ರಮಾದೇವಿ ಅವರುಗಳು ಪ್ರತಿಷ್ಠಾನಕ್ಕೆ ಸಲ್ಲಿಸಿದ ಸೇವೆಯನ್ನು ದಾಖಲಿಸಿ ಅವರಿಗೆ ಸಭೆಯು ವಂದನೆಗಳನ್ನು ಸಲ್ಲಿಸಿತು. ೩೮ನೇ ವಾರ್ಷಿಕ ಸರ್ವಸದಸ್ಯರ ಸಭೆಯಲ್ಲಿ ಚುನಾಯಿತರಾದ ಕಾರ್ಯಕಾರಿ ಸಮಿತಿ ಸದಸ್ಯರಿಗೆ ಸಭೆಯು ಅಭಿನಂದಿಸಿತು.

## ಸೆಪ್ಟೆಂಬರ್ ೨೦೧೮ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

**ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಪ್ರತಿಷ್ಠಾನ**



### ೦೭-೦೯-೨೦೧೮ ಶುಕ್ರವಾರ ಸಂಜೆ- ೬-೦೦ ಗಂಟೆಗೆ

**"ಅಕ್ಕರಗೊಟ್ಟಿ"-೪೨**

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : ಕುಮಾರವ್ಯಾಸ ಭಾರತದ 'ಧರ್ಮವ್ಯಾಧ ಪ್ರಸಂಗ '

ಚಾಲನೆ ನೀಡುವವರು : ಶ್ರೀ ಕೆ.ಎನ್. ಭಗವಾನ್
ನಿವೃತ್ತ ಇಂಜಿನಿಯರ್ ಮತ್ತು ಲೇಖಕರು.



### ೦೯-೦೯-೨೦೧೮ ಭಾನುವಾರ ಬೆಳಿಗ್ಗೆ ೧೧-೦೦ ಗಂಟೆಗೆ

**ಶ್ರೀಮತಿ ಸಾವಿತ್ರಮ್ಮ-ಪ್ರೊ॥ ಎಂ.ವಿ.ಸೀತಾರಾಮಯ್ಯ ಸಾಹಿತ್ಯ ಪುರಸ್ಕಾರ**

ಪುರಸ್ಕಾರ ಪ್ರದಾನ ಮತ್ತು ಅಧ್ಯಕ್ಷತೆ : ಡಾ॥ ಟಿ.ವಿ. ವೆಂಕಟಾಚಲ ಶಾಸ್ತ್ರೀ
ಪ್ರಖ್ಯಾತ ವಿದ್ವಾಂಸರು

ಪುರಸ್ಕಾರವನ್ನು ಪಡೆಯುವವರು : ಶ್ರೀ ಸೀತಾರಾಮ ಜಾಗೀರ್‌ದಾರ್
ಪ್ರಖ್ಯಾತ ಶಾಸನತಜ್ಞರು



### ೧೯-೦೯-೨೦೧೮ ಬುಧವಾರ ಸಂಜೆ - ೪-೦೦ಗಂಟೆಗೆ

**ಸಾಹಿತ್ಯ ಸಂವಾದ**

ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ

ಕರ್ನಾಟಕ ಲೇಖಕಿಯರ ಸಂಘದ ಕಾರ್ಯಕ್ರಮ

ಮುಖ್ಯ ಅತಿಥಿ : ಡಾ. ಕೆ.ಆರ್. ಸಂಧ್ಯಾರೆಡ್ಡಿ
ಖ್ಯಾತ ಸಾಹಿತಿಗಳು ಮತ್ತು ಜಾನಪದ ತಜ್ಞರು

ಉಪನ್ಯಾಸದ ವಿಷಯ : ಫಿನ್ನಿಶ್ ಮಹಾಕಾವ್ಯ 'ಕಲೆವಲ'ದ ಅನುವಾದವನ್ನು ಕುರಿತು

### ೨೨-೦೯-೨೦೧೮ ಶನಿವಾರ ಸಂಜೆ ೬-೦೦ ಗಂಟೆಗೆ

**'ಸಾಹಿತ್ಯ ವಿಹಾರ'-೭**

ಸಾಕ್ಷ್ಯಚಿತ್ರ ಪ್ರದರ್ಶನ

# ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳು

## ೦೮-೮-೨೦೧೮ - ಸಾಹಿತ್ಯ ಸಂಚಲನ - ೨

**ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ**
**ಕರ್ನಾಟಕ ಲೇಖಕಿಯರ ಸಂಘದ ಕಾರ್ಯಕ್ರಮ**

ಮುಖ್ಯ ಅತಿಥಿ : ಶ್ರೀಮತಿ ಭುವನೇಶ್ವರಿ ಹೆಗಡೆ, ಖ್ಯಾತ ಹಾಸ್ಯ ಸಾಹಿತಿ
ವಿಷಯ : ನಗೆ ಚಿಮ್ಮುವ ಬಗೆ




ಕರ್ನಾಟಕ ಲೇಖಕಿಯರ ಸಂಘವು ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ, ದಿನಾಂಕ ೮, ಆಗಸ್ಟ್ ೨೦೧೮ರಂದು ಬಿ.ಎಂ.ಶ್ರೀ ಕಲಾಭವನದ ಎಂ.ವೀ.ಸಿ ಸಭಾಂಗಣದಲ್ಲಿ ಆಯೋಜಿಸಿದ್ದ 'ಸಾಹಿತ್ಯ ಸಂಚಲನ' ಸರಣಿಯ ಎರಡನೇ ಕಾರ್ಯಕ್ರಮದಲ್ಲಿ ಖ್ಯಾತ ಹಾಸ್ಯ ಸಾಹಿತಿ ಪ್ರೊ. ಭುವನೇಶ್ವರಿ ಹೆಗಡೆಯವರು 'ನಗು ಚಿಮ್ಮುವ ಬಗೆ' ಎನ್ನುವ ವಿಷಯ ಕುರಿತು ಉಪನ್ಯಾಸ ನೀಡಿದರು..ಭುವನೇಶ್ವರಿಯವರು ನಮ್ಮೊಳಗಿನ ವಿನೋದ ಪ್ರಜ್ಞೆಯನ್ನು ಹೇಗೆ ಜೀವಂತವಾಗಿರಿಸಿಕೊಳ್ಳಬೇಕೆಂದು ಉದಾಹರಣೆಗಳೊಡನೆ ವಿವರಿಸಿದರು.ಆಧ್ಯಾತ್ಮ ಮತ್ತು ಪರಿಶುದ್ಧ ಹಾಸ್ಯ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ.ಬದುಕನ್ನು ಬೆಸೆಯುವ ಎರಡು ಅದ್ಭುತ ಶಕ್ತಿಗಳು ಎಂದು ಮುಂದುವರಿಸಿ ಹಾಸ್ಯಕ್ಕೆ ಲಿಂಗಭೇದವಿರುವುದಿಲ್ಲ. ವಯಸ್ಸಿನ ನಿರ್ಬಂಧವೂ ಇರುವುದಿಲ್ಲ ಎಂದರು.ಸ್ವಭಾವ ವೈಚಿತ್ರಗಳೇ ಹಾಸ್ಯದ ಜೀವಾಳ. ನನಗೆ ಕರಾವಳಿಯ ಬಸ್ ಪ್ರಯಾಣ ಹಾಸ್ಯದ ಬಾಗಿಲನ್ನು ತೆರೆದಿಟ್ಟಿತು ಎನ್ನುತ್ತಾ ಬಸ್ ಪ್ರಯಾಣದ ವಿವಿಧ ಭಂಗಿಗಳನ್ನು ಯೋಗಾಸನದ ಭಂಗಿಗಳಿಗೆ ಹೋಲಿಸಿ ಪ್ರೇಕ್ಷಕರಲ್ಲಿ ನಗೆ ಚಿಮ್ಮಿಸಿದರು. "ಕನ್ನಡ ಸಾಹಿತ್ಯ ಲೋಕದ ವಿಮರ್ಶಕ ವರ್ಗ ಹಾಸ್ಯವನ್ನು ಲಘುವಾಗಿ ಪರಿಗಣಿಸಿ, ಗಂಭೀರವಾಗಿ ಕಡೆಗಣಿಸಿದೆ' ಎಂದು ಖೇದ ವ್ಯಕ್ತಪಡಿಸಿದರು.ಅವರು ತಮ್ಮ ಗುರುಗಳಾದ ಪಾ.ವೆಂ.ಆಚಾರ್ಯ, ಹೆಸರಾಂತ ಹಾಸ್ಯಲೇಖಕರುಗಳಾದ ಬೀಛಿ ಮತ್ತು ಟಿ.ಪಿ.ಕೈಲಾಸಂರವರ ಉದಾಹರಣೆಗಳೊಡನೆ ತಾವು ಹಾಸ್ಯಕ್ಕೆ ಬೇಕಾದ ನೀತಿ ಸಂಹಿತೆಯನ್ನು ರೂಪಿಸಿಕೊಂಡ ಬಗೆಯನ್ನು ತಿಳಿಸಿದರು.

ಬಿ.ಎಂ.ಶ್ರೀ ಪ್ರತಿಷ್ಠಾನದ ಅಧ್ಯಕ್ಷ ಡಾ. ಪಿ,ವಿ. ನಾರಾಯಣರವರು ಮಾತನಾಡುತ್ತಾ ಕೆಲವೊಮ್ಮೆ ಆಧ್ಯಾತ್ಮದಲ್ಲಿ ಅಸಹಾಯಕತೆಯೂ ನಗುವನ್ನು ಮೂಡಿಸಲು ಸಮರ್ಥವಾಗುತ್ತದೆ.ದೇವಾಲಯಕ್ಕೆ ಕೆಲವರು ಭಕ್ತಿಗಿಂತ ಪ್ರಸಾದದ ಮೇಲಿನ ಆಸೆಗೆ ಭೇಟಿ ಕೊಡುತ್ತಾರೆ.ಮನೆಯ ಗೋಳನ್ನು ಮರೆಯಲು ಹಾಸ್ಯ ಕಾರ್ಯಕ್ರಮಗಳಿಗೆ ಬಂದರೆ ಆಶ್ಚರ್ಯವಿಲ್ಲ ಎಂದರು.

ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷೆ ವನಮಾಲಾ ಸಂಪನ್ನ ಕುಮಾರ್ ಅವರು ಸಂಘವು ಮುಂದಿನ ದಿನಗಳಲ್ಲಿ ಸಾಹಿತ್ಯಕ್ಕೆ ಸಂಬಂಧಿಸಿದ ವೈವಿಧ್ಯಮಯ ಕಾರ್ಯಕ್ರಮಗಳನ್ನು ಆಯೋಜಿಸುತ್ತಿದೆಯೆಂದೂ ಲೇಖಕಿಯರು ಹಾಗೂ ಸಾಹಿತ್ಯಾಸಕ್ತರು ಸಹಕಾರ ನೀಡಬೇಕೆಂದೂ ಮನವಿ ಮಾಡಿದರು.ಪ್ರಸಿದ್ಧ ಹಾಸ್ಯ ಲೇಖಕಿ ಟಿ.ಸುನಂದಮ್ಮರವರನ್ನು ನೆನಪು ಮಾಡಿಕೊಂಡು, ಅವರ ಹಾಸ್ಯ ಇಂದಿಗೂ ನಮ್ಮೆಲ್ಲರ ಮನದಲ್ಲಿ ಹಚ್ಚಹಸಿರಾಗಿದೆ ಎಂದು ಹೇಳುತ್ತಾ, ನಗುವಿನ ಮಹತ್ವವನ್ನು ಅರಿತರೆ ಇಡೀ ಜಗತ್ತೇ ಸುಂದರವಾಗುತ್ತದೆ ಎಂದು ಅಭಿಪ್ರಾಯ ಪಟ್ಟು ಸಭೆಗೆ ವಂದನಾರ್ಪಣೆ ಮಾಡಿದರು.

ಕರ್ನಾಟಕ ಲೇಖಕಿಯರ ಸಂಘದ ಸಹ ಕಾರ್ಯದರ್ಶಿ ಜಿ.ವಿ.ನಿರ್ಮಲರವರು ಸಭೆಗೆ ಸ್ವಾಗತ ಕೋರಿದರು. ಕರ್ನಾಟಕ ಲೇಖಕಿಯರ ಸಂಘದ ಕಾರ್ಯದರ್ಶಿ ನಾಗರತ್ನ ಚಂದ್ರಶೇಖರ್‌ರವರು ಕಾರ್ಯಕ್ರಮ ನಿರ್ವಹಣೆ ಹಾಗೂ ಮುಖ್ಯ ಅತಿಥಿಗಳ ಪರಿಚಯ ಮಾಡಿದರು.

## ಸಾಹಿತ್ಯವಿಹಾರ-೫

೨೫-೭-೨೦೧೮ ರಂದು ಸಾಹಿತ್ಯವಿಹಾರ-೫ ಕಾರ್ಯಕ್ರಮದಲ್ಲಿ ಡಾ. ಕಮಲಾ ಹಂಪನಾ ಅವರ ಸಾಕ್ಷ್ಯಚಿತ್ರ ತೋರಿಸಲಾಯಿತು.

## ೧೩-೮-೨೦೧೮ ಸೋಮವಾರ - ಎ. ಸುಬ್ಬಯ್ಯಹೆಗಡೆ ಶಾಸ್ತ್ರೀ, ಯಂ.ಕೆ. ವಿಜಯಲಕ್ಷ್ಮಿ, ಎನ್. ಅನಂತರಂಗಚಾರ್, ಅನಂತರಂಗ ಪ್ರತಿಷ್ಠಾನ ದತ್ತಿ ಉಪನ್ಯಾಸ

ಉಪನ್ಯಾಸ : ಡಾ.ಎಂ. ರಾಮಕೃಷ್ಣಯ್ಯ , ಪ್ರಾಧ್ಯಾಪಕರು, ಎಂ.ಇ.ಎಸ್. ಸ್ನಾತಕೋತ್ತರ ಪದವಿ ಕಾಲೇಜು ಮಲ್ಲೇಶ್ವರಂ, ಬೆಂಗಳೂರು

ವಿಷಯ : ಬ್ರಹ್ಮ ಶಿವನ ಸಮಯ ಪರೀಕ್ಷೆ- ಒಂದು ಅವಲೋಕನ

ಡಾ. ಪಿ.ವಿ.ನಾರಾಯಣ ಅವರು ಉಪನ್ಯಾಸಕರನ್ನು ಸಭೆಗೆ ಪರಿಚಯಿಸಿ, ದತ್ತಿ ದಾನಿಗಳ ಕುಟುಂಬವರ್ಗದವರನ್ನೂ, ಉಪನ್ಯಾಸಕರನ್ನೂ ಮತ್ತು ಸಭಿಕರನ್ನೂ ಸ್ವಾಗತಿಸಿ, ವೇದಿಕೆಯನ್ನು ಡಾ.ಎಂ.ರಾಮಕೃಷ್ಣಯ್ಯ ಅವರಿಗೆ ತೆರವು ಮಾಡಿದರು.

ಬಿ.ಎಂ.ಶ್ರೀ ಪ್ರತಿಷ್ಠಾನದೊಂದಿಗೆ ನಿಕಟ ಸಂಪರ್ಕದಲ್ಲಿದು,



ವಿದ್ಯಾರ್ಥಿಗಳಿಗಾಗಿ ಆಯೋಜಿಸಿದ್ದ ಕೆಲವು ಕಾರ್ಯಗಾರ/ಕಾರ್ಯಕ್ರಮಗಳಲ್ಲಿ ತಾವೂ ವಿದ್ಯಾರ್ಥಿಗಳ ಜೊತೆಗೆ ಭಾಗವಹಿಸಿದ್ದನ್ನು ನೆನಪಿಸಿಕೊಂಡು ಡಾ.ಎಂ.ರಾಮಕೃಷ್ಣಯ್ಯ ತಮ್ಮ ಉಪನ್ಯಾಸವನ್ನು ಪ್ರಾರಂಭಿಸಿದರು."ನಮ್ಮ ಸಂಸ್ಕೃತಿಯ ಹಿನ್ನೆಲೆ, ಸ್ವರೂಪ, ಕಾಲದೊಂದಿಗೆ ಧರ್ಮಗಳ ವಿಚಾರ, ಮತ್ತು ಭಾಷಾ ಚರಿತ್ರೆಯ ಕೆಲವು ಅಂಶಗಳೂ ಸಹ ಸಾಹಿತ್ಯ ಚರಿತ್ರೆಯ ಅಧ್ಯಯನಕ್ಕೆ ಪೂರಕವಾಗುತ್ತದೆ.ಅಲ್ಲದೆ ಆಯಾ ಕಾಲಘಟ್ಟದ ಸಾಮಾಜಿಕ, ರಾಜಕೀಯ ಸಹ ಸಾಹಿತ್ಯ ಚರಿತ್ರೆಯನ್ನು ಅರಿಯಲು ಅವಶ್ಯಕವಾಗಿರುತ್ತವೆ." ಹೀಗೆಂದು ತಮ್ಮ ಉಪನ್ಯಾಸವನ್ನು ಪ್ರಾರಂಭಿಸಿ, ಹನ್ನೆರಡನೆ ಶತಮಾನದವರೆಗೆ ಜೈನಯುಗ, ಹನ್ನೆರಡನೆ ಶತಮಾನದ ಮಧ್ಯ ಕಾಲದಿಂದ ಹದಿನೈದನೆಯ ಶತಮಾನದವರೆಗೆ ವೀರಶೈವಯುಗ ಮತ್ತು ಹದಿನೈದನೆಯ ಶತಮಾನದಿಂದ ಮುಂದೆ ಹತ್ತೊಂಬತ್ತನೆಯ ಶತಮಾನದವರೆಗೆ ಬ್ರಾಹ್ಮಣಯುಗ ಎಂಬ ಕಾಲಘಟ್ಟದ ವಿವರ ನೀಡಿ, ಕವಿ ಬ್ರಹ್ಮಶಿವನ ಕಾಲವನ್ನು ಪಂಡಿತ ಆರ್. ನರಸಿಂಹಾಚಾರ್ಯರು ನಿರ್ಧರಿಸುವಂತೆ ಸುಮಾರು ಕ್ರಿ.ಶ ೧೧೩೫ ಎನ್ನಬಹುದೆಂದರು.ಸಮಯ ಪರೀಕ್ಷೆ ಹಾಗೂ ತ್ರೈಲೋಕ್ಯ ಚೂಡಾಮಣಿ ಎಂಬ ಎರಡು ಕೃತಿಗಳನ್ನು ಅವನು ರಚಿಸಿದ್ದಾನೆ ಎಂದು ತಿಳಿಸಿದರು.

"೧೫ ಅಧಿಕಾರಗಳಿರುವ ಈ ಕೃತಿ ಕಂದ ವೃತ್ತಗಳಿಂದ ಕೂಡಿದ್ದು, ವೃತ್ತವೂ ಅಲ್ಲಲ್ಲಿ ಬಂದಿದೆ.ಜೈನೇತರ ಮತಗಳಲ್ಲಿ ಸಾರವಿಲ್ಲವೆಂಬ ಅಂಶವನ್ನು ವಿಡಂಬನಾತ್ಮಕವಾಗಿ ಮತ್ತು ಬಹಳ ನಿಷ್ಠುರವಾಗಿ ಹೇಳಿರುವುದನ್ನು ಕಾಣಬಹುದು. ಅಂದರೆ ಕಾರಣ, ಆಗಿನ ಪರಿಸ್ಥಿತಿಯಲ್ಲಿ ಜೈನರಿಗೂ ಮತ್ತು ಇತರ ಮತದವರಿಗೂ ಸಮಾಜದಲ್ಲಿ ಘರ್ಷಣೆ, ಉಂಟಾಗುತ್ತಿದ್ದನ್ನು ಸೂಚಿಸುತ್ತದೆ.ಮೇಲಾಗಿ, ಕವಿಯು ತಾನು ಮೊದಲು ಶೈವನಾಗಿದ್ದು, ಜೈನಮತವನ್ನು ಶ್ರೇಷ್ಠವೆಂದು ಪರಿಗಣಿಸಿ ನಂತರ ಜೈನ ಧರ್ಮವನ್ನು ಸ್ವೀಕರಿಸಿದ್ದಾಗಿ ಅಭಿಪ್ರಾಯ ವ್ಯಕ್ತಪಡಿಸಿದ್ದಾನೆ."ಎಂದು ತಿಳಿಸಿ ಅವನ ಕೃತಿಯಿಂದ ಆಯ್ದು ಕೆಲವು ಪದ್ಯಗಳನ್ನು ವಾಚಿಸಿ, ಅರ್ಥೈಸಿದರು.

ಡಾ. ವಿಜಯಾ ಸುಬ್ಬರಾಜ್ ಅವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

**ಕಿರು ಪರಿಚಯ**

### ಡಾ. ರಾಮಕೃಷ್ಣಯ್ಯ ಎಂ

ಡಾ. ರಾಮಕೃಷ್ಣಯ್ಯ ಎಂ ಇವರು ರಾಮನಗರ ಜಿಲ್ಲೆ ಕನಕಪುರ ತಾಲ್ಲೂಕಿನ ಪಡುವಣಗೆರೆ ಗ್ರಾಮದಲ್ಲಿ ದಿನಾಂಕ ೦೮-೦೫-೧೯೭೨ ರಲ್ಲಿ ಜನಿಸಿ ಪದವಿ ಶಿಕ್ಷಣವನ್ನು ರೂರಲ್ ಕಾಲೇಜು ಕನಕಪುರದಲ್ಲಿ ಮುಗಿಸಿ ನಂತರ ೧೯೯೫ ರಿಂದ ೧೯೯೭ರ ವರೆಗೆ ಕನ್ನಡ ಸ್ನಾತಕೋತ್ತರ ಪದವಿಯನ್ನು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಆಧ್ಯಯನ ಕೇಂದ್ರದಲ್ಲಿ ಪ್ರಥಮ ಶ್ರೇಣಿಯೊಂದಿಗೆ ಪಡೆದು ೨೦೦೪ ರಲ್ಲಿ ಡಾ ಕಾರ್ಲೋಸ್ ಎಸ್. ರವರ ಮಾರ್ಗದರ್ಶನದಲ್ಲಿ ಡಾಕ್ಟರೇಟ್ ಪದವಿಯನ್ನು ಪಡೆದಿರುತ್ತಾರೆ, ಇವರು "ಮುಂಬೆಳಕು," ,"ಒಂದು ಊರಿನ ಜನಪದ ಕಥೆಗಳು" ಎಂಬ ಪುಸ್ತಕಗಳನ್ನು ಹೊರತಂದಿದ್ದಾರೆ. ೧೦ಕ್ಕು ಹೆಚ್ಚು ಲೇಖನಗಳನ್ನು ಪ್ರಕಟಿಸಿರುತ್ತಾರೆ.೨೦ಕ್ಕೂ ಹೆಚ್ಚು ವಿಶೇಷ ಉಪನ್ಯಾಸಗಳನ್ನು ನೀಡಿದ್ದು ಹಲವು ವಿಚಾರ ಸಂಕಿರಣಗಳಲ್ಲಿ ಪ್ರಬಂಧಗಳನ್ನು ಮಂಡಿಸಿದ್ದಾರೆ. ಪ್ರಸ್ತುತ ಎಂ.ಇ.ಎಸ್ ಪದವಿ ಕಾಲೇಜಿನ ಕನ್ನಡ ಸ್ನಾತಕೋತ್ತರ ಕೇಂದ್ರದಲ್ಲಿ ಮುಖ್ಯಸ್ಥರಾಗಿರುತ್ತಾರೆ.

## 'ಅಕ್ಕರಗೊಟ್ಟಿ'-೪೧ – ೦೯-೦೮-೨೦೧೮

ವಿಷಯ: ೭೦ನೇ ದಶಕದ ಹಿಂದಿನ ರಂಗ ಪ್ರಯೋಗದ ಚಟುವಟಿಕೆಗಳು.

ಚಾಲನೆ ನೀಡಿದವರು : ಶ್ರೀಪತಿ ಮಂಜನ ಬೈಲು(ರಂಗತಜ್ಞರು)

ಕಾರ್ಯಕ್ರಮದ ಆರಂಭದಲ್ಲಿ ಡಾ. ಪಿ.ವಿ.ನಾರಾಯಣ ಅವರು



ಅತಿಥಿಗಳ ಪರಿಚಯಮಾಡಿ ಸ್ವಾಗತಿಸಿರಂಗಭೂಮಿಯ ಆಸಕ್ತರನ್ನೂ, ಸಭಿಕರನ್ನೂಸ್ವಾಗತಿಸಿದರು.

ಶ್ರೀ ಶ್ರೀಪತಿ ಮಂಜನ ಬೈಲು ಅವರು ಈ ಕೆಳಕಂಡ ವಿಷಯಗಳನ್ನು ಸಭೆಯಲ್ಲಿ ಮಂಡಿಸಿದರು:

ಕ್ರಿ.ಶ. ೧೮೪೦ರ ಕಾಲಘಟ್ಟದಲ್ಲಿ ಸಾಂಗ್ಲಿ ಸಂಸ್ಥಾನದಲ್ಲಿ ಕರಣಕನಾಗಿದ್ದ ವಿಷ್ಣು ಪಂತಭಾವೆ ಸ್ಥಾಪಿಸಿದ. 'ಸಾಂಗ್ಲೀಕರ್ ಸಂಗೀತ ನಾಟಕ ಮಂಡಳಿಯು ಮಹಾರಾಷ್ಟ್ರದ ಜೊತೆಗೆ ಉತ್ತರ ಕರ್ನಾಟಕದ ಪ್ರಮುಖ ಪಟ್ಟಣಗಳಲ್ಲೂ, ಮರಾಠಿ ನಾಟಕಗಳನ್ನು ರಚಿಸಿ ಆಡಲು ಪ್ರಾರಂಭವಾದದ್ದು, ಅಲ್ಲಿಂದ ಮುಂದೆ ಮರಾಠಿ ನಾಟಕಗಳ ಅಲೆಯ ಆರಂಭವಾದ ಪರಿಣಾಮವಾಗಿ, ಕನ್ನಡ ರಂಗಭೂಮಿಯಲ್ಲಿ ನಟರು ಹಾಗೂ ಪ್ರೇಕ್ಷಕರು ಆಸಕ್ತಿ ಕಳೆದುಕೊಂಡು, ಕನ್ನಡ ರಂಗಚಟುವಟಿಕೆಗಳು ಕುಂಠಿತಗೊಂಡವು.

೧೮೪೦ರಿಂದ ೧೮೭೨ರವರೆಗೆ ಅಣ್ಣಾ ಸಾಹೇಬ್ ಕಿರ್ಲೋಸ್ಕರ್, ಹಲಸಗಿ ನಾಟಕ ಮಂಡಳಿ, ವೆಂಕಣ್ಣಾಚಾರ್ಯ ಅಗಳಗಟ್ಟೆ ಮುಂತಾದವರ, ಪರಿಶ್ರಮವನ್ನು ಶ್ರೀ ಶ್ರೀಪತಿ ಮಂಜನ ಬೈಲು ಅವರು ಪರಿಚಯಮಾಡಿದರು.

೧೮೭೨ರಿಂದ ೧೮೭೭ರವರೆಗೆ ಶಾಂತಕವಿ ಎಂದೇ ಪ್ರಸಿದ್ಧರಾದ ಸಕ್ಕರಿ ಬಾಳಾಚಾರ್ಯರು, ಗಂಡು ಕಲೆ ಯಕ್ಷಗಾನದ ಪ್ರಭಾವದಿಂದಾಗಿ, ಸ್ಪೂರ್ತಿ ಪಡೆದು ಮರಾಠಿಗರಂತೆಯೇ ಹೊಸನಾಟಕಗಳನ್ನು ರಚಿಸಿ, ಕಲಾವಿದರಿಗೆ ತರಬೇತಿ ನೀಡಿ ಕನ್ನಡ ನಾಟಕಗಳತ್ತ ಪ್ರೇಕ್ಷಕರನ್ನು ಆಕರ್ಷಿಸಿದರು.ಶಾಂತಕವಿಗಳಿಂದಲೇ ಕರ್ನಾಟಕ ರಂಗಭೂಮಿ ವೃತ್ತಿನಿರತವಾಗಿ ೧೮೭೭ರಲ್ಲಿ ಹೊರಹೊಮ್ಮಲು ಸಾಧ್ಯವಾಯಿತು.

ಹೀಗೆ ಬೆಳಗಾವಿಯಲ್ಲಿ ವೃತ್ತಿ ನಿರತ ಕನ್ನಡ ನಾಟಕಗಳ ಬೆಳವಣಿಗೆಯಲ್ಲಿ ಗದುಗಿನ ಶ್ರೀ ವೀರನಾರಾಯಣ ಪ್ರಾಸಾದಿತ ಕೃತಪುರ ನಾಟಕಮಂಡಳಿ, ಅಭಿನಯಿಸುತ್ತಿದ್ದ 'ಉಷಾಪರಿಣಯ' ನಾಟಕ ದಾಖಲೆ ಪ್ರದರ್ಶನ ಕಂಡಿತು. ಗಂಡು ಕಲೆ ಯಕ್ಷಗಾನದ ಪ್ರಭಾವ ಎದ್ದು ಕಾಣುತ್ತಿತ್ತು.೧೮೮೨ ರಿಂದ ೧೯೭೦ರಲ್ಲಿ ಅವನತಿಯ ಹಾದಿ ಹಿಡಿಯುವವರೆಗೆ, ಶಿವಲಂಗೇಶ್ವರ ನಾಟಕ ಮಂಡಳಿ, ಕುಣ್ಣೂರು, ಕಾಡಸಿದ್ದೇಶ್ವರ ನಾಟಕಮಂಡಳಿ, ಶಿರಟ್ಟಿ, ೧೯೩೨ರಲ್ಲಿ ಗುರು ಸೇವಾ ನಾಟಕ ಮಂಡಳಿಯವರ ಕೊಡುಗೆ, ಪಾರ್ನಿ ನಾಟಕ ಮಂಡಳಿಯವರ ಶಿಸ್ತು ಪಾಲಿಸುವಿಕೆಯನ್ನೂ ನಮ್ಮ ನಾಟಕ ನಿರ್ದೇಶಕರು ಜಾರಿಗೆ ತಂದರು.

ಮರಾಠಿ ರಂಗಾಸಕ್ತರು, ಸಹ, ಕನ್ನಡ ನಾಟಕಗಳ ಬಗ್ಗೆ ಆಸೆ ಬೆಳಸಿಕೊಂಡು, ನಂತರದ ದಿನಗಳಲ್ಲಿ ಕನ್ನಡ ನಾಟಕಗಳ ಉತ್ಸವಗಳನ್ನೂ ಆಯೋಜಿಸುವ ಮಟ್ಟಕ್ಕೆ ಕನ್ನಡ ನಾಟಕರಂಗ ಬೆಳೆಯಿತು.

ಈಗ ೪೦ವರ್ಷಗಳು ಕಳೆದಿವೆ. ರಂಗಸಂಪದ ಕ್ರಿಯಾ ಶೀಲವಾಗಿದೆ. ಮರಾಠಿ ನಟರೂ ಸಹ ಕನ್ನಡ ನಾಟಕಗಳಲ್ಲಿ ಆಸಕ್ತಿವಹಿಸಿದಾರೆ.

ಕಾರ್ಯಕ್ರಮವು ಡಾ.ವಿಜಯಾಸುಬ್ಬರಾಜ್ ಅವರ ವಂದನಾರ್ಪಣೆ ಯೊಂದಿಗೆ ಮುಕ್ತಾಯಗೊಂಡಿತು.




**ಪಡು:** ಇದೊಂದು ಕ್ರಿಯಾಪದ, ದ್ರಾವಿಡ ಮೂಲದ್ದು.ತಮಿಳಿನಲ್ಲಿ ಪಟು, ಎಂದೂ, ತುಳುವಿನಲ್ಲಿ ಪಡ ಎಂದೂ, ಮಲಯಾಳಂನಲ್ಲಿ ಪಟುಕ ಎಂದೂ, ತೆಲುಗಿನಲ್ಲಿಯೂ ಪಡು ಎಂದು ಬಳಕೆಯಲ್ಲಿದೆ. ಇದಕ್ಕೆ ಅನೇಕ ಅರ್ಥಗಳಿವೆ. ಕ್ರಿಯಾಪದವಾಗಿ ಈ ಶಬ್ದಕ್ಕೆ ಕೇಶಿರಾಜನು ಎರಡು ಅರ್ಥಗಳನ್ನು ನೀಡುತ್ತಾನೆ: ಮಲಗು [ನಿದ್ರಿಸು] ಹಾಗೂ ಸಾಯು ಎಂದು (ಪಡು–ಮರಣೇ, ಶಯನೇ ಚ). ಅನುಭವಿಸು ಎಂಬ ಅರ್ಥವು ಆಯಾಸಪಡು, ಕಷ್ಟಪಡು.ಸಂತೋಷಪಡು ಮುಂತಾದ ಕ್ರಿಯಾಸಮಾಸಗಳಲ್ಲಿ ಕಾಣಿಸುತ್ತದೆ.ಬೀಳು ಎಂಬರ್ಥದಲ್ಲಿ ಈ ಪದವು 'ಪಂಪಭಾರತ'ದಲ್ಲಿದೆ (ಧರ್ಮನಂದನನ ಕಾಲ ಮೇಲೆ ಕವಿದು ಪಟ್ಟು). ಮಲಗು ಎಂಬುದು ರೂಪಕವಾಗಿ ಕೂಡು ಅಥವಾ [ಲೈಂಗಿಕಕ್ರಿಯೆಯಲ್ಲಿ] ಸೇರು ಎಂಬ ಅರ್ಥವನ್ನೂ ಪಡೆಯುತ್ತದೆ. ಈ ಅರ್ಥದಲ್ಲಿ ಬ್ರಹ್ಮಶಿವ ತನ್ನ 'ಸಮಯಪರೀಕ್ಷೆ'ಯಲ್ಲಿ "ಪರಲಲನೆಯೊಳಂ ಪಡುಗೆ ಶಿವಭಕ್ತನಾಗಿರ್ದೊಡೆ ಪೊರ್ದವು ಪಾಪಮೆಂಬರ್ ಆಱಿಡಿಕಾರರ್" ಎನ್ನುತ್ತಾನೆ. (ಪಡುಗೆ=ನೆರೆಯಲಿ]. ಪಡು ಎಂಬುದಕ್ಕಿರುವ ಮಲಗು ಎಂಬ ಅರ್ಥವು ರೂಪಕವಾಗಿ ಸೂರ್ಯನು ಮುಳುಗುವುದನ್ನು (ಸೂರ್ಯ ಮಲಗುವುದನ್ನು) ಸೂಚಿಸುತ್ತದೆ."ನೇಸರ್ ಪಟ್ಟೊಡೆ ಕಿತ್ತಯ್ಯಂಗೆ ಆಸನ್ನಕಾಲಮಾದುದು" ಎಂಬ ಪ್ರಯೋಗ 'ವಡ್ಡಾರಾಧನೆ'ಯಲ್ಲಿದೆ.ಈ ಅರ್ಥಗಳೆಲ್ಲವೂ ತೆಲುಗು ತಮಿಳುಗಳಲ್ಲಿಯೂ ಇವೆ.

ಪಡು ಎಂಬುದು ವಿಶೇಷಣವಾಗಿಯೂ ಬಳಕೆಯಲ್ಲಿದೆ: ಪಡುಕೋಣೆ ಎಂದರೆ ಮಲಗುವ ಮನೆ (ಈ ಹೆಸರಿನ ಊರೊಂದಿದೆ); ಈ ಅರ್ಥದಲ್ಲಿ ಪಡುವೋವರಿ ಎಂಬ ಶಬ್ದವು 'ಸುಕುಮಾರಚರಿತೆ'ಯಲ್ಲದೆ (ಆ ಕನ್ಯೆ ಧನದೇವನ ಪಡುವೋವರಿಯ ಮನೆಯನೆಯ್ದಿ). ಪಡುನೇಸಱ್ ಎಂದರೆ ಅಸ್ತಮಿಸುತ್ತಿರುವ ಸೂರ್ಯ; ಸೂರ್ಯ ಮುಳುಗುವ ದಿಕ್ಕು ಎಂಬರ್ಥದಲ್ಲಿ ಪಡುವು ಎಂಬ ಶಬ್ದ 'ಪಂಪಭಾರತ'ದಲ್ಲಿದೆ (ನರನ ರಥಮಂ ಪಡುವು ಎಣ್ಗಾವುದುವರಂ ಸಿಡಿಲ್ವಿನಂ ಎಚ್ಚು).ಪಡುವರ್ಣ ಎಂಬು ಇದರ ಇನ್ನೊಂದು ರೂಪ. ಸೂರ್ಯ ಮುಳುಗುವಾಗಿನ ಕೆಂಪು ಬಣ್ಣವನ್ನು ಕುವೆಂಪು ಪಡುಗೆಂಪು ಎನ್ನುತ್ತಾರೆ; 'ಶ್ರೀ ರಾಮಾಯಣ ದರ್ಶನಂ'ನಲ್ಲಿ "ರವಿ ಮುಳುಗಿ, ಮೂಡಣ ದೆಸೆಗೆ ಪಡುಗೆಂಪು ಪಸರಿಸುತ್ತಿರೆ" ಎಂಬ ಸಾಲಿದೆ.

=====

**ಪಡುವಲಕಾಯಿ:** ಈ ಶಬ್ದದ ಮೊದಲ ಭಾಗ ಪಡುವಲ ಎಂಬುದನ್ನು ನೋಡಿದರೆ ಇದು ಪಡುವಲ ಅಥವಾ ಪಶ್ಚಿಮ ದೇಶದಿಂದ ಬಂದಿರುವ ಪರಂಗಿ ಅಥವಾ ಟೊಮೆಟೋಗಳಂತಹ ತರಕಾರಿಯಾಗಿರಬಹುದೇ ಎಂಬ ಅನುಮಾನ ಹುಟ್ಟಿಸುವಂತಿದೆ.ಆದರೆ ಹಾಗೇನಿಲ್ಲ ಇದು ದೇಶೀಯ ಬಳ್ಳಿ ಮತ್ತು ಅದರ ಕಾಯಿಯನ್ನು ಸೂಚಿಸುತ್ತದೆ. ಇದು ಸಂಸ್ಕೃತದ ಪಟೋಲ ಎಂಬ ಶಬ್ದದ ತದ್ಭವರೂಪ. ಈ ಕಾಯಿಯಲ್ಲಿ ಎರಡು ಬಗೆ: ಕಹಿ ಮತ್ತು ಕಹಿಯಲ್ಲದ್ದು. ಕಹಿಯಾದ ಪ್ರಭೇದಕ್ಕೆ 'ಪಟೋಲ' (ಈ ಶಬ್ದ ಪುಲ್ಲಿಂಗ ಶಬ್ದ) ಎಂಬ ಹೆಸರಿದ್ದರೆ ಕಹಿಯಲ್ಲದ್ದಕ್ಕೆ 'ಪಟೋಲಿಕಾ' (ಇದು ಸ್ತ್ರೀಲಿಂಗ ಶಬ್ದ) ಎಂಬ ಹೆಸರಿದೆ.ಅದೇ ಕನ್ನಡದಲ್ಲಿ 'ಪಟಲ' ಎಂದಾಗಿ 'ಪಡಲ' ಎಂದೂ 'ಪಡಳ' ಎಂದೂ ಆಗಿದೆ. ಹಳಗನ್ನಡದಲ್ಲಿನ ಅನೇಕ ಶಬ್ದಗಳ 'ಪ'ಕಾರವು ನಡುಗನ್ನಡದಲ್ಲಿ 'ಹ'ಕಾರವಾಗುವಂತೆ ಪಡಲ ಎಂಬುದು 'ಹಡಲ' ಎಂಬ ರೂಪವನ್ನೂ ಪಡೆಯುತ್ತದೆ; ಈ ರೂಪವು ಅನೇಕ ಕನ್ನಡ ಕಾವ್ಯಗಳಲ್ಲಿ ಬಳಕೆಯಾಗಿದೆ. ಕ್ರಿಶ ೧೦೨೫ ರಲ್ಲಿ ರಚಿತವಾದ ಚಾವುಂಡರಾಯನ 'ಲೋಕೋಪಕಾರ' ಎಂಬ ಕೃತಿಯಲ್ಲಿ ಪಡಲದ ಕಾಯಿ ಉಲ್ಲೇಖಗೊಂಡಿದೆ; ಪಡಲದ ಕಹಿಯನ್ನು ಹೋಗಲಾಡಿಸುವ ಪರಿಯನ್ನು ಅಲ್ಲಿ ತಿಳಿಸಲಾಗಿದೆ.ಅಂದರೆ ಈ ತರಕಾರಿಯ ಉಪಯೋಗ ಬಹು ಹಿಂದಿನಿಂದಲೂ ನಡೆದುಕೊಂಡು ಬಂದಿದೆ. ಪಟೋಲ ಎಂಬ ಶಬ್ದವು ಪ್ರಾಕೃತದಲ್ಲಿ ಪಡೋಲ ಎಂದಾಗುತ್ತದೆ, ತಮಿಳಿನಲ್ಲಿ ಪುಟಲ್ ಎಂದೂ, ಪುಟಲೈ ಎಂದೂ ತೆಲುಗಿನಲ್ಲಿ ಪೊಟ್ಲ ಎಂದೂ, ತುಳುವಿನಲ್ಲಿ ಪಟ್ಲ ಎಂದೂ, ಮಲಯಾಳಂನಲ್ಲಿ ಪುಟ್ಟಲ್ ಅಥವಾ ಪಿಟ್ಟಲ್ ಅಥವಾ ಪುಟೋಲ್ ಎಂದೂ ಆಗುತ್ತದೆ. ಪಡುವಲ ಕಾಯಿ ಬೂದುಬಣ್ಣವಾಗಿರುತ್ತದೆ; ಒಂದು ಪ್ರಭೇದದಲ್ಲಿ ಉದ್ದುದ್ದ ಪಟ್ಟೆಗಳೂ ಇರುತ್ತವೆ. ಪಡುವಲ ಕಾಯಿಯು ಸಣಕಲಾಗಿ ಉದ್ದವಾಗಿದ್ದು ಹಾವಿನ ಆಕಾರವನ್ನು ಹೋಲುವುದರಿಂದ ಇಂಗ್ಲಿಷ್‌ನಲ್ಲಿ ಇದನ್ನು 'ಸ್ನೇಕ್ ಗೌರ್ಡ್' ಎಂದೇ ಕರೆಯುತ್ತಾರೆ.ಆದರೆ ಈಚೆಗೆ ಆಧುನಿಕ ತಂತ್ರಜ್ಞಾನವನ್ನು ಬಳಸಿಕೊಂಡು ಇದರ ಆಕಾರವನ್ನು ಪರಿಷ್ಕರಿಸಿ ಗಿಡ್ಡದಾಗಿ ಮಾಡಲಾಗಿದೆ.

## ಎಂವಿಸೀ – ಬದುಕು – ಒಂದು ನೋಟ–೩

––ಡಾ. ಪಿ.ವಿ. ನಾರಾಯಣ

ಕಲಾಭಿರುಚಿ

ಸೀತಾರಾಮಯ್ಯನವರಿಗೆ ಸಂಗೀತಾಭಿರುಚಿ ಆನುವಂಶಿಕವಾಗಿ ಬಂದದ್ದೆಂದು ಕಾಣುತ್ತದೆ.ಅವರ ಮುತ್ತಜ್ಜ ತಿಮ್ಮಪ್ಪದಾಸರು ಸ್ವತಃ ಕೀರ್ತನಕಾರರಾಗಿದ್ದವರು, ಹರಿದಾಸರು.ಮನೆಯಲ್ಲಿ ದೇವರನಾಮಗಳನ್ನು ರಾಗ–ತಾಳಬದ್ಧವಾಗಿ ಹಾಡುವ ಹಿನ್ನೆಲೆಯೂ ಇತ್ತು.ಸೀತಾರಾಮಯ್ಯನವರಿಗೆ ಅವರ ತಂದೆ ಮೃದಂಗವಾದನದಲ್ಲಿ ಒಂದು ವರ್ಷದ ತರಬೇತಿ ಕೊಡಿಸಿದರು.ಅದರಲ್ಲಿ ಸಾಕಷ್ಟು ಪರಿಣತಿ ಪಡೆದ ಹುಡುಗ ಸಂಗೀತ ಕಚೇರಿ ಮತ್ತು ಹರಿಕತೆಗಳಿಗೆ ಮೃದಂಗವಾದನವನ್ನು ಮಾಡುವಷ್ಟಾಗಿ ಬೆಳೆದದ್ದು ಅಚ್ಚರಿಯ ವಿಷಯವೇನಲ್ಲ. ಹಾಗೆಯೇ ಕಾಲೇಜಿನ ಯೂನಿಯನ್ ಕಾರ್ಯಕ್ರಮಗಳಲ್ಲಿಯೂ ವಾದನ ಕಾರ್ಯಕ್ರಮ ನಡೆಯುತ್ತಿತ್ತು.ಅವರಿಗೆ ಮುಂದೆ ವೈಣಿಕ ವಿದ್ವಾನ್ ರಾಜಾರಾಯರ ಪರಿಚಯವಾಗಿ ಅವರ ವೀಣಾ ವಾದನಕ್ಕೂ ಪಕ್ಕವಾದ್ಯವಾಗಿ ಮೃದಂಗ ನುಡಿಸುವಂತಾಯಿತು.ಹಾಗೆಯೇ ಇತರ ಸಂಗೀತ ವಿದ್ವಾಂಸರ ಪರಿಚಯವೂ ಬೆಳೆದು ಅವರ ಸಂಗೀತಾಭಿರುಚಿ ಗಟ್ಟಿಯಾಯಿತು.ಭಾವಗೀತೆಗಳಿಗೆ ಸಂಗೀತ ಸಂಯೋಜನೆ ಮಾಡುವ ಪ್ರಯೋಗವನ್ನೂ ಬಹು ಹಿಂದೆಯೇ ಅವರು ಕೈಗೊಂಡಂತೆ ಕಾಣುತ್ತದೆ. ತಮ್ಮ 'ಹಕ್ಕಿಹಾಡು' ಎಂಬ ಕವನ ಸಂಕಲನದ ರಚನೆಗಳಿಗೆ ರಾಜಾರಾಯ–ರಿಂದ ಸ್ವರಪ್ರಸ್ತಾರ ಹಾಕಿಸಿ ಅಚ್ಚು ಮಾಡಿಸಿದ್ದೊಂದು ಅಪರೂಪದ ಘಟನೆ.

ಸೀತಾರಾಮಯ್ಯನವರಿಗೆ ಚಿತ್ರಕಲೆಯಲ್ಲಿ ಮೊಳೆತ ಆಸಕ್ತಿಯನ್ನು ಹಿಂದೆಯೇ ಗಮನಿಸಿದ್ದೇವೆ. ಲಾಯರ್ ಕೃಷ್ಣರಾಯರ ಮನೆಯಲ್ಲಿದ್ದಾಗ ಅವರ ಬಂಧುವೊಬ್ಬರು ಚಿತ್ರಕಾರರಾಗಿದ್ದರು; ಹೀಗಾಗಿ ಚಿಕ್ಕ ವಯಸ್ಸಿಗೇ ಸೀತಾರಾಮಯ್ಯನವರ ಮನಸ್ಸನ್ನು ಮೈಸೂರು ಶೈಲಿಯ ಚಿತ್ರಕಲೆ ಸೆಳೆಯಿತು. ಅಲ್ಲದೆ ಆ ಹಿರಿಯರು ಒಂದು ಚಿತ್ರ ಪೂರ್ಣಗೊಳಿಸಲು ಮೂರ್ನಾಲ್ಕು ತಿಂಗಳು ತೆಗೆದುಕೊಳ್ಳುತ್ತಿದ್ದುದನ್ನು ನೋಡಿದ ಇವರಿಗೂ ತಾಳ್ಮೆ, ಗಾಢಾಸಕ್ತಿಗಳು ಬಲಗೊಂಡವು.ಇದರಿಂದಾಗಿ ಚಿಕ್ಕವಯಸ್ಸಿಗೆ ಮನೆಯ ಹತ್ತಿರದಲ್ಲಿದ್ದ ಆನೆ ಕರೋಟಿಯ ಆನೆಗಳು ಮತ್ತು ಅಳಸಿಂಗಾಚಾರ್ಯರ ರಾಮಾಯಣಾನುವಾದದಲ್ಲಿನ ಹನುಮಂತನ ಚಿತ್ರಗಳಿಂದ ಪ್ರೇರಿತರಾಗಿ ಸೀತಾರಾಮಯ್ಯ ಅವುಗಳನ್ನು ಅನುಕರಿಸಿ ಚಿತ್ರ ಬರೆಯತೊಡಗಿದರು. ರೇಖೆಯಲ್ಲಿ ಆಕಾರ ಮೂಡಿಸಿ ತಾವೇ ಮಾಡಿಕೊಂಡ 'ಕಡ್ಡಿ–ಹತ್ತಿ'ಯ ಕುಂಚದಿಂದ ಬಣ್ಣ ತುಂಬಲು ತೊಡಗಿದರು. ಜೊತೆಗೆ ಪಕ್ಕದ ಮನೆಯಲ್ಲಿದ್ದ ಅಮೃತರಾವ್ ಎಂಬ ಕಲಾಭ್ಯಾಸಿಯು ರಚಿಸಿದ ರೇಖಚಿತ್ರಗಳನ್ನೂ ಅನುಕರಿಸಿದರು. ಮುಂದೆ ಶಿಲ್ಪಿ ಸಿದ್ಧಲಿಂಗಸ್ವಾಮಿಗಳ ತಮ್ಮ ಅಪ್ಪಾಜಿಯವರ ಪರಿಚಯವಾಗಿ ಅವರು ವಿವಿಧ ಭಂಗಿಗಳಲ್ಲಿ ರಚಿಸುತ್ತಿದ್ದ ಮಾನವ ಮುಖಗಳನ್ನು ಅನುಕರಿಸಿ ಬರೆಯುವ ಅಭ್ಯಾಸವನ್ನೂ ಮಾಡಿದರು.ಅವರಿಗೆ ಚಿತ್ರಕಲೆಯಲ್ಲಿ ಎಷ್ಟು ಆಸಕ್ತಿ ಮೂಡಿತೆಂದರೆ ಚಾಮರಾಜೇಂದ್ರ ಟೆಕ್ನಲಾಜಿಕಲ್ ಇನ್ಸ್ಟಿಟ್ಯೂಟ್‌ನಲ್ಲಿ ಬೆಳಿಗ್ಗೆ 7–30 ಯಿಂದ 9–30 ರವರೆಗೆ ನಡೆಯುತ್ತಿದ್ದ ಚಿತ್ರಕಲೆಯ ಮೂಲಶಿಕ್ಷಣವನ್ನೂ ಸ್ವಲ್ಪ ಕಾಲ ಪಡೆದರು.1927–29 ಅವಧಿಯಲ್ಲಿ ಅವರು ರಚಿಸಿದ 'His Majesty Drink' ಮತ್ತು 'ಕುರುಡು ಭಿಕ್ಷುಕ' ಚಿತ್ರಗಳು ಇಂದಿಗೂ ಇವೆ.

**ಮುಂದುವರಿಯುವುದು**

## ೩೮ನೇ ವಾರ್ಷಿಕ ಸರ್ವಸದಸ್ಯರ ಸಭೆಯಲ್ಲಿ ಚುನಾಯಿತರಾದ ಕಾರ್ಯಕಾರಿ ಸಮಿತಿ ಸದಸ್ಯರಿಗೆ ಹೊಂಗನಸು ಅಭಿನಂದಿಸುತ್ತದೆ.

### ನೂತನವಾಗಿ ಚುನಾಯಿತರಾದ ಕಾರ್ಯಕಾರಿ ಸಮಿತಿ ಸದಸ್ಯರ ವಿವರಗಳು

### ಶ್ರೀ ಡಿ.ನಂ. ವೆಂಕಟರಮಣಯ್ಯ



ನಿವೃತ್ತ ಬ್ಯಾಂಕ್ ಅಧಿಕಾರಿ, ಹಲವಾರು ಸಂಘ ಸಂಸ್ಥೆಗಳಲ್ಲಿ ಈ ಹಿಂದೆ ಹಾಗೂ ಈಗ ಪದಾಧಿಕಾರಿಯಾಗಿ ಸೇವೆಸಲ್ಲಿಸಿರುತ್ತಾರೆ.ಇವರು ೨೦೧೦ರಿಂದ ೨೦೧೬ರ ವರೆಗೆ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದರು.ಈ ಅವಧಿಯಲ್ಲಿ ಕೆಲ ಕಾಲ ಇವರು ಪ್ರತಿಷ್ಠಾನದ ಆಂತರಿಕ ಲೆಕ್ಕ ಪರಿಶೋಧಕರಾಗಿ ಲೆಕ್ಕಪತ್ರ ವ್ಯವಸ್ಥೆಯನ್ನು ಸದೃಢಗೊಳಿಸಿದ್ದಲ್ಲದೇ ಪ್ರತಿಷ್ಠಾನದ ಸರ್ವತೋಮುಖ ಬೆಳವಣಿಗೆಗಾಗಿ ಶ್ರಮಿಸಿರುತ್ತಾರೆ.

### ಡಾ.ಆರ್.ವಾದಿರಾಜು

ಸಹಾಯಕ ಪ್ರಾಧ್ಯಾಪಕರು, ವಿಜಯಕಾಲೇಜು



ಡಾ. ಆರ್. ವಾದಿರಾಜು ಅವರು ವಿಜಯಪದವಿ ಕಾಲೇಜು, ಆರ್.ವಿ.ರಸ್ತೆ, ಬಸವನಗುಡಿ, ಬೆಂಗಳೂರು ಇಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.ಲೇಖಕ, ಕವಿ, ವಿಮರ್ಶಕರಾಗಿ, ೪ ಸ್ವಂತ ಕೃತಿಗಳನ್ನು ರಚಿಸಿದ್ದು ಹಾಗೂ ೭ ಸಂಪಾದಕ ಕೃತಿಗಳನ್ನು ಪ್ರಕಟಿಸಿದ್ದಾರೆ.ಸ್ನೇಹಕೂಟ ಸಾಂಸ್ಕೃತಿಕ ವೇದಿಕೆಯ ಅಧ್ಯಕ್ಷರಾಗಿ, ವೇದಿಕೆಯ ವತಿಯಿಂದ ೨೫ ಪುಸ್ತಕಗಳನ್ನು ಪ್ರಕಟಣೆ ಮಾಡಿದ್ದಾರೆ. ಹಾಗೂ ಇದರ ವತಿಯಿಂದ ೧೦೦ ಸದಾಭಿರುಚಿ ಕಾರ್ಯಕ್ರಮಗಳನ್ನು ನಿರೂಪಿಸಿದ್ದಾರೆ.

### ಡಾ. ಆರ್. ಲಕ್ಷ್ಮೀನಾರಾಯಣ



ಡಾ. ಆರ್.ಲಕ್ಷ್ಮೀನಾರಾಯಣ ಅವರು ೧೯೭೧ ರಿಂದ ೨೦೦೬ರವರೆಗೆ ವಿವಿಧ ಸರ್ಕಾರಿ ಕಾಲೇಜುಗಳಲ್ಲಿ ಕನ್ನಡ ಅಧ್ಯಾಪಕ, ಪ್ರಾಧ್ಯಾಪಕ ಮತ್ತು ಪ್ರಿನ್ಸಿಪಾಲರಾಗಿ ಸೇವೆ ಸಲ್ಲಿಸಿ, ೨೦೦೬ ಮೇ ಯಿಂದ ೨೦೦೭ರಡಿಸೆಂಬರ್ ವರೆಗೆ ಧಾರವಾಡದಲ್ಲಿ ಇಲಾಖೆಯ ಜಂಟಿ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ. ಡಾ.ಪಿ.ವಿ.ನಾರಾಯಣ ಅವರ ಮಾರ್ಗದರ್ಶನದಲ್ಲಿ ೨೦೦೪ರಲ್ಲಿ 'ವಕ್ರೋಕ್ತಿ ಜೀವಿತ- ಒಂದು ಅಧ್ಯಯನ' ಎಂಬಮಹಾಪ್ರಬಂಧಕ್ಕೆಬೆಂಗಳೂರುವಿಶ್ವವಿದ್ಯಾಲಯದಪಿ.ಎಚ್.ಡಿ.ಪದವಿಪಡೆದಿರುತ್ತಾರೆ. ಇಂಗ್ಲಿಷ್ಮತ್ತುಹಿಂದಿಯಿಂದ ಅನುವಾದ ಮಾಡುವುದರಲ್ಲಿ ನಿರತರು.ಆರು ವಿಮರ್ಶಾ ಕೃತಿಗಳು, ಹನ್ನೊಂದು ಅನುವಾದಿತ ಕೃತಿಗಳು ಹಾಗೂ ಮೂರು ಸಂಪಾದಿತ ಕೃತಿಗಳು ಪ್ರಕಟಗೊಂಡಿವೆ.

ಪ್ರಶಸ್ತಿಗಳು: ಕೇಂದ್ರ ಸಾಹಿತ್ಯ ಅಕಾಡೆಮಿ ಅನುವಾದ ಪ್ರಶಸ್ತಿ, ೨೦೦೪ರ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ೨೦೧೩ರ ಕರ್ನಾಟಕ ಸಾಹಿತ್ಯ ಅಕಡೆಮಿ ಪ್ರಶಸ್ತಿ, ಗೊರೂರು ಸಾಹಿತ್ಯ ಪ್ರಶಸ್ತಿ ಹಾಗೂ ರಾಜ್ಯ ಸರ್ಕಾರದಿಂದ ಉತ್ತಮ ಕಾಲೇಜು ಶಿಕ್ಷಕ ಪ್ರಶಸ್ತಿ.

### ಶ್ರೀ ಸಂಗಮೇಶ ಬಾದವಾಡಗಿ



ಶ್ರೀ ಸಂಗಮೇಶ ಬಾದವಾಡಗಿಯವರು ಕರ್ನಾಟಕ ಸರ್ಕಾರದ ಶಿಕ್ಷಣ ಮತ್ತು ಆಹಾರ ನಾಗರೀಕ ಸರಬರಾಜು ಇಲಾಖೆ ಸೇವೆ ಸಲ್ಲಿಸಿದ್ದು ಕರ್ನಾಟಕ ರಾಜ್ಯಗಡಿ ಅಭಿವೃದ್ಧಿ ಪ್ರಾಧಿಕಾರದಲ್ಲಿ ವಿಶೇಷಾಧಿಕಾರಿಯಾಗಿ ನಿವೃತ್ತಿ ಹೊಂದಿದವರು.ಶ್ರೀಯುತರು ಎರಡು ಅವಧಿಗೆ ರಾಜ್ಯ ಕೇಂದ್ರ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸಿದ್ದು ಹಲವಾರು ಅಖಿಲಭಾರತ ಸಾಹಿತ್ಯ ಸಮ್ಮೇಳನ, ಜಿಲ್ಲಾ, ತಾಲೂಕು ಸಾಹಿತ್ಯಸಮ್ಮೇಳನಗಳನ್ನು ಸಂಘಟಿಸಿರುತ್ತಾರೆ.ಕುಷ್ಟಗಿ, ತಾಲೂಕು ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರಾಗಿದ್ದರು.

ಶ್ರೀಯುತರು ವಿವಿಧ ಸಾಹಿತ್ಯ ಪ್ರಕಾರಗಳಿಗೆ ಸಂಬಂಧಿಸಿದಂತೆ ಒಟ್ಟು ಹದಿನೈದಕ್ಕು ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಅನೇಕ ಹೊರದೇಶಗಳಿಗೂ ಅಲ್ಲಿನ ಕನ್ನಡ ಸಂಘಗಳ ಆಹ್ವಾನದ ಮೇರೆಗೆ ಭೇಟಿ ಕನ್ನಡ ಸಾಹಿತ್ಯ ಸಂಸ್ಕೃತಿ ಪರಿಚಯಿಸುವಲ್ಲಿ ಶ್ರಮಿಸಿದ್ದಾರೆ.ಅನೇಕ ರಾಜ್ಯಮಟ್ಟದ ಅಂತರಾಷ್ಟ್ರೀಯ ಮಟ್ಟದ ಸಂಸ್ಥೆಗಳಿಂದ ಅನೇಕ ಪ್ರಶಸ್ತಿಗಳಿಗೂ ಭಾಜನರಾಗಿದ್ದಾರೆ.ಪ್ರಸ್ತುತ ಸಂಗಮೇಶ ಬಾದವಾಡಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಸದಸ್ಯರಾಗಿರುತ್ತಾರೆ.

## ಅವಲೋಕನ

### ಡಾ॥ ಸಿ.ಪಿ.ಕೆ ಅವರ ಅಂಗೈಯಲ್ಲಿ ಶ್ರೀರಾಮಾಯಣ ದರ್ಶನಂ

**- ಡಾ॥ ರಾಜಶ್ರೀ ಕಿಶೋರ.**

'ಶ್ರೀ ರಾಮಾಯಣದರ್ಶನಂ'- ಕನ್ನಡ ಮೊಟ್ಟಮೊದಲ ಜ್ಞಾನಪೀಠ ಪ್ರಶಸ್ತಿ(೧೯೬೭)ಪಡೆದ ಮಹಾಕಾವ್ಯ. ದೇಶಿಪರಂಪರೆಯ ಕವಿಗಳಾದ ವಾಲ್ಮೀಕಿ, ಪಂಪ, ರನ್ನ, ಕುಮಾರವ್ಯಾಸರ ಕಾವ್ಯ ಶೈಲಿಯ ಜೊತೆಗೆ ಪಾಶ್ಚಾತ್ಯ ಮಹಾಕಾವ್ಯಗಳ ಪರಂಪರೆಯನ್ನು ರೂಢಿಸಿಕೊಂಡು ಬಂದ ಔಚಿತ್ಯ ಪೂರ್ಣಕೃತಿಯಾಗಿದೆ. 'ಶ್ರೀರಾಮಾಯಣ' ಕೃತಿ ಹೆಸರು ಒಂದೇಯಾದರೂ 'ದರ್ಶನ'ವೆಂಬ ಹೆಸರು ವಿಶೇಷವಾಗಿದೆ. ದರ್ಶನವೆಂದರೆ 'ಕತೆಯಲ್ಲಿ ರಸಾತ್ಮಕವಾಗಿ ಮೂಡಿದ ನಿರ್ದಿಷ್ಟ ತತ್ವ' ಎಂದು ಲೇಖಕರಾದ ಡಾ.ಸಿ.ಪಿ.ಕೆ. ರವರು ಸ್ಪಷ್ಟಪಡಿಸುತ್ತಾರೆ.

ಡಾ.ಸಿ.ಪಿ.ಕೆರವರ ಅಂಗೈಯಲ್ಲಿ 'ಶ್ರೀರಾಮಾಯಣದರ್ಶನಂ' ಎಂಬ ಕೃತಿ ಮುಖ್ಯವಾಗಿ ಮೂರು ದೀರ್ಘ ಅಧ್ಯಾಯಗಳನ್ನು ಒಳಗೊಂಡ ಕೃತಿ. ವಾಲ್ಮೀಕಿ ರಾಮಾಯಣ ಮತ್ತು ಕುವೆಂಪು ರಾಮಾಯಣಗಳ ವಿಸ್ತೃತವಾದ ತೌಲನಿಕ ಅಧ್ಯಯನದ ಹರವು ಇಲ್ಲಿದೆ. ವಾಲ್ಮೀಕಿರಾಮಾಯಣದಲ್ಲಿ ಸಂಕೀರ್ಣಪಾತ್ರಗಳು ಸೃಷ್ಟಿಗೊಂಡಿವೆ. ವಾಲ್ಮೀಕಿ ರಾಮಾಯಣದಲ್ಲಿ ಕೆಲ ಪಾತ್ರಗಳು ಸರಳರೇಖೆಯಂತಿದ್ದರೆ, ಕುವೆಂಪು ರಾಮಾಯಣದಲ್ಲಿ ರಾವಣನ ರೂಪ, ಗುಣ ಭಯಂಕರವಾಗಿ ಮೋಹ ಪಾಶಕ್ಕೊಳಗಾದ ವಿಚಿತ್ರ ಆತಂಕ, ತಳಮಳಗಳ ನಡುವೆ ಅನೇಕ ಪಾತ್ರಗಳುಕಂಡು ಬಂದರೆ, ಕುವೆಂಪು ರಾಮಾಯಣದಲ್ಲಿ ಕಾಮುಕದಿಂದ ಸೀತೆಯನ್ನು ಪಡೆಯಲು ಸೋತ- ರಾವಣ ಸೀತೆಯನ್ನು ಮಾತೆಯಾಗಿ ಗೆಲ್ಲುತ್ತಾನೆ. ಕೊನೆಗೆ ರಾವಣನ ಆತ್ಮ ರಾಮನಲ್ಲಿ ಸೇರಿ, ರಾಮನ ಶಕ್ತಿಯಿಂದಲೇ ರಾಮನ ಅಂತ್ಯ ದುರಂತವಲ್ಲದೇ ಮಂಗಳಾಂತವಾಗಿ ಇಂದಿನ ಯುಗ ಧರ್ಮಕ್ಕೆ ಸರ್ವೋದಯ ತತ್ವಕ್ಕೆ ಅನುಗುಣವಾಗಿದೆ ಎಂಬುದನ್ನು ಸ್ಪಷ್ಟಪಡಿಸುತ್ತದೆ.

೨ನೇ ಅಧ್ಯಾಯವಾದ ಪ್ರತಿಯೊಂದು ಪಾತ್ರಗಳ ಸೃಷ್ಟೀಕರಣದ ಹಿನ್ನಲೆಯಲ್ಲಿ ಕಲೆಯನಲ್ಲದ ಶಿಲ್ಪಿ, ಶಿಲೆಯನ್ನೇ ಎಂದೋ ಮುಗಿದ ಬಾಹ್ಯ ಚರಿತ್ರೆಯಲ್ಲ, ಇದೊಂದು ಆತ್ಮಚರಿತ್ರೆಯೆಂಬುದನ್ನು ನಿರೂಪಿಸುತ್ತದೆ.

**೮ನೇ ಪುಟಕ್ಕೆ**

ಕಿರು ಪರಿಚಯ

## ಶ್ರೀಪತಿ ಮಂಜನ ಬೈಲು(ರಂಗತಜ್ಞರು)

ಜನ್ಮ ದಿನಾಂಕ : ೦೮-೦೬-೧೯೫೨

ಶಾಲಾ ಬಾಲಕನಿದ್ದಾಗ ಯಕ್ಷಗಾನದಲ್ಲಿ ಪಾತ್ರವಹಿಸಿವ ಮುಖಾಂತರ ನಾಟಕ ಕ್ಷೇತ್ರಕ್ಕೆ ಪ್ರವೇಶ. ಓದನ್ನು ಅರ್ಧಕ್ಕೆ ನಿಲ್ಲಿಸಿ ಹೊಟ್ಟೆಪಾಡಿಗಾಗಿ ಘಟ್ಟ ಹತ್ತಿದವರು.

ಬೆಳಗಾವಿಯಲ್ಲಿ ಕನ್ನಡ ನಾಟಕಗಳನ್ನು ಆಡುವುದು ಸಾಧ್ಯವೇ ಇಲ್ಲದಂತಹ ಕಾಲದಲ್ಲಿ ಬೆಳಗಾವಿಗೆ ಕಾಲಿಟ್ಟವರು ಶ್ರೀಪತಿ ಮಂಜನಬೈಲು, ಅದು ೧೯೭೬ರ ಕಾಲ, ಬೆಳಗಾವಿಯಲ್ಲಿ ಮರಾಠಿ ನಾಟಕಗಳದೆ ಹಾವಳಿ. ಅಲ್ಲಿಯವರೆಗೆ ಕನ್ನಡದ ನಾಟಕಗಳು(ಹೊಸ ಅಲೆಯ ನಾಟಕಗಳು) ಬೆಳಗಾವಿಯ ರಂಗಮಂದಿರಗಳಲ್ಲಿ ಪ್ರದರ್ಶಿಸಿದ ದಾಖಲೆಯೆ ಇರಲಿಲ್ಲ. ಅಲ್ಲದೆ ಸಾರ್ವಜನಿಕವಾಗಿ ಆಧುನಿಕ ಕನ್ನಡ ನಾಟಕಗಳ ಪ್ರದರ್ಶನವಾದ ದಾಖಲೆಯೂ ಬೆಳಗಾವಿಗಿರಲಿಲ್ಲ. ೧೯೮೨ರಲ್ಲಿ ಆರು ದಿನಗಳ ಕಾಲ ನಾಟಕಗಳ ಉತ್ಸವವನ್ನು ಹಮ್ಮಿಕೊಳ್ಳಲಾಗಿತ್ತು. ೧೯೯೪ರಲ್ಲಿ ೧೪ ದಿನಗಳ ಕಾಲ ನಡೆಸಿದ ಬಹು ಭಾಷಾನಾಟಕೋತ್ಸವ ಯಶಸ್ವಿಯಾಗಿ ನಡೆದಿದ್ದು ಬೆಳಗಾವಿ ಪ್ರೇಕ್ಷಕರು ಇನ್ನು ನೆನಪಿಸುವಂತಿದೆ.೧೯೯೮ರಲ್ಲಿ ಆಯೋಜಿಸಿದ ಒಂಭತ್ತು ದಿನಗಳ ಗಿರೀಶ್ ಕಾರ್ನಾಡರ ನಾಟಕಗಳಿಗೆ ತಂಡೋಪ ತಂಡವಾಗಿ ಪ್ರೇಕ್ಷಕರು ಬಂದು, ಈ ಉತ್ಸವ 'ನ ಭೂತೋ ನ ಭವಿಷ್ಯತಿ' ಅನ್ನುವಷ್ಟು ಯಶಸ್ವಿಯಾಯಿತು. ಹೀಗಾಗಿ ಕಳೆದ ೪೦ ವರ್ಷಗಳಿಂದ ರಂಗಸಂಪದವು ಕ್ರಿಯಾಶೀಲವಾಗಿ ಉಳಿಯುವುದು ಸಾಧ್ಯವಾಗಿದೆ.

ಶ್ರೀಪತಿಯವರ ಕಠಿಣ ಪರಿಶ್ರಮ, ಕಲಾಸೇವೆಯನ್ನು ತಮ್ಮ ಬದುಕಿನ ಅವಿಭಾಜ್ಯ ಅಂಗವನ್ನಾಗಿ ಮಾಡಿಕೊಂಡು, ಪರದೆ ಎಳೆಯುವುದರಿಂದ ಹಿಡಿದು ನಿರ್ದೇಶಕನ ಸ್ಥಾನದವರೆಗೆ ಎಲ್ಲ ಕಾರ್ಯಗಳನ್ನು ತನ್ಮಯತೆಯಿಂದ ಮಾಡಿ, ಈ ನಿರಂತರ ರಂಗ ಚಟುವಟಿಕೆಗಳ ಬೆಳವಣಿಗೆಯ ಹಿಂದೆ ಕಾರಣರಾಗಿದ್ದಾರೆ ಎಂದರೆ ತಪ್ಪಾಗದು.

ಪ್ರತಿಷ್ಠಾನವು "ಕೃತಿ-ಚಿತ್ರ" ವೆಂಬ ಪ್ರಾಯೋಗಿಕ ಕಾರ್ಯಕ್ರಮಕ್ಕೆ ಶ್ರೀಟಿ.ಎಸ್. ರಂಗಾ ಅವರೊಡಗೂಡಿ 'ಕೃತಿ-ಚಿತ್ರ' ಎಂಬ ಚಿತ್ರ ಪ್ರದರ್ಶನಕ್ಕೆ ಸಹಾಯ ಮಾಡಿರುತ್ತಾರೆ.ಅವರು ಹಲವಾರು ನಾಟಕಗಳಲ್ಲಿ, ಧಾರಾವಾಹಿಗಳಲ್ಲಿ, ಸಾಕ್ಷ್ಯಚಿತ್ರಗಳಲ್ಲಿ, ಚಲನ ಚಿತ್ರಗಳಲ್ಲಿ, ಧಾರಾವಾಹಿಗಳಲ್ಲಿ, ಸಾಕ್ಷ್ಯಚಿತ್ರಗಳಲ್ಲಿ, ಚಲನಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಕರ್ನಾಟಕ ನಾಟಕ ಅಕಾಡೆಮಿಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, 'ಹನುಮಂತರಾವ್ ಡಂಬಳ ಪ್ರಶಸ್ತಿ, ಮುಂಬಯಿ ಪೃಥ್ವಿ ಥಿಯೇಟರ್‌ನ 'ಎಕ್ಸ್‌ಪ್ಯುಟ್' ಪ್ರಶಸ್ತಿಗಳಲ್ಲದೆ ಹಲವಾರು ಪ್ರಶಸ್ತಿಗಳು ಲಭಿಸಿದೆ.

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2018-2020
dt. 27-10-2017
Office of Posting: Bangalore PSO, Bangalore 560026
Price :Annual Subscription Rs. 20/-
Date of publishing and Posting : 30-08-2018

## ಶ್ರೀ ಬಿ.ಎಸ್.ಗುರುಪ್ರಸಾದ್

ಬಿ.ಎಸ್ಸಿ, ಬಿ.ಕಾಂ. ಶಾಸನ ಶಾಸ್ತ್ರದಲ್ಲಿ ಡಿಪ್ಲೊಮಾ,

ವೃತ್ತಿ ವಿವರ : ಭಾರತೀಯ ಜೀವ ವಿಮಾ ನಿಗಮದಲ್ಲಿ ಆಡಳಿತಾಧಿಕಾರಿಯಾಗಿ ನಿವೃತ್ತಿ ಹೊಂದಿದ್ದು ಪ್ರಸ್ತುತ ಜೀವ ಬಿಮಾ ನಿಗಮದಲ್ಲಿ ಪ್ರತಿನಿಧಿಯಾಗಿರುತ್ತಾರೆ. ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ಹಸ್ತಪ್ರತಿ ಸಂರಕ್ಷಣಾ ಕಾರ್ಯದಲ್ಲಿ ತೊಡಗಿಸಿಕೊಂಡಿರುತ್ತಾರೆ. ಕರ್ನಾಟಕ ಇತಿಹಾಸ ಅಕಾದೆಮಿಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿರುತ್ತಾರೆ. ಜೊತೆಗೆ ಚಾರಣ, ಪಕ್ಷಿವೀಕ್ಷಣೆ, ಛಾಯಾಗ್ರಹಣ ಚಟುವಟಿಕೆಗಳಲ್ಲದೇ ಹಲವಾರು ಸಂಘಸಂಸ್ಥೆಗಳ ಜೊತೆ ಒಡನಾಟ ಹೊಂದಿರುತ್ತಾರೆ.

**೭ನೇ ಪುಟದಿಂದ - ಅವಲೋಕನ**

'ಪಾಪಿಗುದ್ದಾರಮಿಹುದೌ ಸೃಷ್ಟಿಯ ಮಹದ್ವ್ಯೂಹ ರಚನೆಯೊಳ್' ಎಂಬ ಧ್ವನಿ ರಾಮಾಯಣ ದರ್ಶನದುದ್ದಕ್ಕೂ ಪ್ರವಹಿಸಿ, ವಿಮರ್ಶೆಗೆ ಕಾರಣವಾಗುತ್ತದೆ.ವಾಲ್ಮೀಕಿ, ಮಂಥರೆ, ರಾಮಾ ಮುಂತಾದವರ ಪಾತ್ರಗಳ ಪೂರ್ವಜೀವನವನ್ನು ಮಾತ್ರ ಚಿತ್ರಿಸಿದರೆ ಕುವೆಂಪುರವರು ಬದುಕಿನ ಉತ್ತರಕಾಂಡ ಚಿತ್ರಿಸುವ ಕಾರ್ಯ ಅನಾದೃಶ್ಯವಾಗಿ ನಡೆದುದನ್ನು ಡಾ.ಸಿ.ಪಿ.ಕೆಯವರು ಗುರುತಿಸುತ್ತಾರೆ. ಪಾತ್ರಗಳಲ್ಲಿ ಸಂಕೀರ್ಣತೆ, ಮನೋವೈಜ್ಞಾನಿಕ ವಿಶ್ಲೇಷಣೆ, ನವೀನ ದೃಷ್ಟಿ, ಸೃಷ್ಟಿಗಳು ಹೇರಳವಾಗಿವೆ. ಉದಾ:- ಮಂಥರೆ 'ಮಂಥೂ ಲಕ್ಷ್ಮೀ'ಯಾಗಿ ಅರಣ್ಯದಲ್ಲಿ ಮಂಥರೆ ಮಗುವಾಗಿ ದೊರೆಯುವುದು. ಕೊನೆ ಕೊನೆಗೆ ರಾವಣನು ಮಹಾನುಭಾವನಾಗಿ ಪರಿಣಮಿಸುವುದು, ರಾವಣ ಕುಂಭಕರ್ಣರು ಸೀತೆಗೆ ಲವ-ಕುಶರಾಗಿ ಜನಿಸುವುದು, ರಾವಣನಲ್ಲಿ ರಾಮುಶಕ್ತಿ ಸುಪ್ತವಾಗಿರುವುದು, ಹೀಗೆ ಹಲವಾರು ಅಂಶಗಳು ಕಂಡು ಬರುತ್ತವೆ. ಸೀತೆಯೊಡನೆ ರಾಮನ ಅಗ್ನಿಪ್ರವೇಶ, ರಾಮಾ ಸೀತೆಯನ್ನು ಅಪಹರಿಸಿ ತಂದಾಗ ಮಂಡೋದರಿ ಮತ್ತು ರಾವಣನ ನಡುವೆ ನಡೆಯುವ ಸಂಭಾಷಣೆ ಸೊಗಸಾಗಿ ಮೂಡಿ ಬಂದಿದೆ.

ಡಾ.ಸಿ.ಪಿ.ಕೆ.ರವರು 'ರಾಮಾಯಣದರ್ಶನ' ಕೃತಿಯಲ್ಲಿ ಪಾತ್ರಗಳ ಪರಿಚಯದ ಜೊತೆಗೆ ಪಾತ್ರಗಳ ಸೂಕ್ಷ್ಮವಾದ ವಿಕಾಸ ಕಂಡುಬರುತ್ತದೆ.ಲಕ್ಷಣ, ಆಂಜನೇಯ, ಕೈಕೆ, ದಶರಥ ಪಾತ್ರಗಳು ವಾಲ್ಮೀಕಿ ರಾಮಾಯಣದ ಹೋಲಿಕೆಯಿದ್ದರೂ, ಕುವೆಂಪುರವರು ವಿಭಿನ್ನ ವ್ಯಕ್ತಿತ್ವ ತುಂಬುತ್ತಾರೆ.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ-ಅಂಚೆ

ಶ್ರೀಮತಿ/ಶ್ರೀ..............................................................................

..............................................................................

..............................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು - ೧೯
ದೂರವಾಣಿ : ೨೬೬೧೫೮೭೭